॥ ಶ್ರೀಃ ॥

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.

ಅ. ನಾರ್ಣಪ್ಪಯ್ಯನವರಿಂದ ವಿರಚಿತವಾದ

# ಕನ್ನಡ ಸ್ತ್ರೀಪದ್ಯಮಾಲಿಕೆ

ತೃತೀಯ ಮುದ್ರ[illegible]

ಶ್ರೀಕೃಷ್ಣಮುದ್ರಣಾಲಯ, ಉಡುಪಿ

1933

1060

॥ ಶ್ರೀಃ ॥

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.

# ಕನ್ನಡ ಸ್ತ್ರೀಪದ್ಯಮಾಲಿಕೆ.

ತೃತೀಯ ಮುದ್ರಣ, ೧೦೦೦

ಈ ಪುಸ್ತಕವು ನಾಲ್ಕೂರು ಫಿರ್ಕಾ ಶ್ಯಾನಭಾಗ
ಅಗಿದಕಳಿಯ **ನಾರ್ಣಪ್ಪಯ್ಯ**ನವರಿಂದ ರಚಿಸಲ್ಪಟ್ಟು,
ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿತು.

1933

ಬೆಲೆ 0—6—0

# ಗ್ರಂಥಕರ್ತನ ಪ್ರಸ್ತಾವನೆ.



'ಕನ್ನಡ ಸ್ತ್ರೀಪದ್ಯಮಾಲಿಕೆ' ಎಂಬ ಈ ಚಿಕ್ಕ ಪದ್ಯಗ್ರಂಥವು ಕೆಲವು ವರ್ಷಗಳ ಹಿಂದೆ ನನ್ನಿಂದ ರಚಿಸಲ್ಪಟ್ಟಿತು ಆಗ ಅದನ್ನು ಅವಲೋಕಿಸಿದ ನನ್ನ ಬಂಧುಗಳಾದ ಪಾವಂಜೆ ಗುರುರಾಯರು ಉಡುಪಿಯಲ್ಲಿರುವ ತನ್ನ ಸ್ವಕೀಯ ಮುದ್ರಣಾಲಯದಲ್ಲಿ ಮುದ್ರಿಸುವ ಕಾರ್ಯವನ್ನು ಕೈಗೊಂಡು ಪ್ರಥಮಾವೃತ್ತಿ ಒಂದು ಸಹಸ್ರ ಪ್ರತಿ ಛಾಪಿಸಿ ವಿಕ್ರಯಿಸಿದರು ನವೀನ ಪುಸ್ತಕವಾದ್ದರಿಂದ ನಿಧಾನವಾಗಿ ಪ್ರಚಾರವಾದರೂ, ಪುನಃ 1928ರಲ್ಲು ಒಂದು ಸಾವಿರ ಪ್ರತಿಗಳು ದ್ವಿತೀಯ ಮುದ್ರಣವಾಗಿ ಅವುಗಳು ಕೂಡಾ ವ್ಯಯವಾದ್ದರಿಂದ ತೃತೀಯ ಮುದ್ರಣಕ್ಕೆ ಮುಂದರಿಯುವ ಸೂಚನೆಗೊಟ್ಟರು ಇದರಿಂದ ನನ್ನ ಪ್ರಯತ್ನವು ಸಾಮಾನ್ಯವಾಗಿ ಸಫಲವಾಯಿತೆಂಬ ಉಲ್ಲಾಸದಿಂದ ಈ ಪ್ರಸ್ತಾವನೆಯನ್ನು ಬರೆದೆನು ಅಂದರೆ, ನಾನು ರಚಿಸಿದ ಈ ಪದ್ಯಗಳು ವ್ಯಾಕರಣ, ಛಂದಸ್ಸು, ಪ್ರಾಸ, ಪ್ರಾಣಾಕ್ಷರ, ಬೀಜಾಕ್ಷರಾದಿ ಕಾವ್ಯಾಲಂಕಾರ ಶಾಸ್ತ್ರಗಳಿಗನುಸರಿಸಿ ಇರುವವೆಂದಾಗಲಿ, ಈಗಿನ ಜನರ ಮನವನ್ನಾಕರ್ಷಿಸುವ ನವೀನ ಅಂದಗಳಿಂದ ಚಂದವಿರುವುವೆಂದಾಗಲಿ, ಅವುಗಳ ಕೃತಿರಚನೆ, ಚರಿತ್ರೆ, ಭಾಷಾಶೈಲಿಗಳು ಸರ್ವಸಮ್ಮತಿಯುಳ್ಳ ನಿರ್ದೋಷದಿಂದಿರುವುವೆಂದಾಗಲಿ ಹೇಳಲು ಸಾಧ್ಯವಿಲ್ಲ ಆದರೂ ಹಾಡುವ ಅಭಿರುಚಿಯುಳ್ಳ ನಮ್ಮ ದೇಶದ ಸ್ತ್ರೀ ಭಗಿನಿಯರು, ತಮ್ಮ ಶಿಕ್ಷಣಕೊರತೆಯಿಂದ ಬಾಯ ಹಾಡುಗಳನ್ನು ಪರಸ್ಪರ ಅಸಂಬದ್ಧವಾಗಿ ಕಲಿತು ರಾಗ ತಾಳ ಲಯ ಭೇದದಿಂದ ಯದ್ವಾತದ್ವಾ ನುಡಿಯುವ ದೋಷಗಳನ್ನು ದೂರೀಕರಿಸುವದಕ್ಕಾಗಿಯೂ, ತಮ್ಮ ನಿತ್ಯನಡತೆ, ನೈಮಿತ್ತಿಕ ವಿಧಿಗಳು ಬೋಧವಾಗುವಂತೆಯೂ, ಚಿಕ್ಕ ಹುಡುಗಿಯರು ಕೂಡಾ ಸುಲಭವಾಗಿ ಕಲಿತು ಅರ್ಥಜ್ಞಾನವಾಗುವಂತೆ ಸುಲಭ ಶೈಲಿಗಳನ್ನಿಟ್ಟು, ರೂಢಿಯಲ್ಲಿರುವ

ಪದಗಳ ದಾಟಿಯನ್ನು ಕೂಡಾ ಸಾಧ್ಯವಿದ್ದ ಮಟ್ಟಿಗೆ ತೋರಿಸಿ ರಾಗ ತಾಳಗಳನ್ನು ಕೂಡಾ ಕಾಣಿಸಿ, ನಿತ್ಯ ನೈಮಿತ್ತಿಕ, ಶುಭಶೋಭನಾದಿ ಗಳ ಹಾಡುಗಳನ್ನು ಪ್ರತ್ಯೇಕವಾಗಿ ನಮೂದಿಸಿ ಬರೆಯಲ್ಪಟ್ಟಿದೆ ಇದ ರಿಂದ ಕನ್ನಡ ಭಾಷಾ ಅಜ್ಞ-ಅಭಿಜ್ಞರಿಗೆ ಕೂಡಾ ರಾಗಾಭಿಮಾನ ದಿಂದಲೂ, ಚರಿತ್ರಾನುಭವದಿಂದಲೂ ಓದುವ ಉತ್ಸುಕತೆಯುಂಟಾಗಿ, ಭಗವದ್ಭಕ್ತಿಯಿಂದ ಮುಗ್ಧರಾಗುವಂತೆ ಪ್ರತಿ ಪದ್ಯಗಳಲ್ಲಿಯೂ ಅದರ ಚರಿತ್ರೆಗಳು ಮುಖ್ಯಾವತಾರಿಗಳಾದ ಶ್ರೀರಾಮ, ಕೃಷ್ಣರ ಪರ ವಾಗಿ ಕೃತಿಗೊಳಿಸಿ, ನೈಮಿತ್ತಿಕ ಶುಭಷೋಡಶಕ್ರಿಯೆಗಳ ವಿಧಿವಿಧಾನ ಗಳನ್ನು ಸಂಕ್ಷೇಪವಾಗಿ ವರ್ಣಿಸಿ ಬರೆದಿರುವದರಿಂದ ಗುಣಗ್ರಾಹಿಗಳು ಇದರಲ್ಲಿರಬಹುದಾದ ದೋಷಗಳನ್ನು ತ್ಯಜಿಸಿ ಗುಣಗಳನ್ನು ಸ್ವೀಕರಿಸಿ, ಅರಿಯದವರಿಗೆ ಬೋಧಿಸಿ, ಇತರ ಪದ್ಯಪುಸ್ತಕಗಳಂತೆ ಇದು ಪ್ರತಿ ಗೃಹದ ಗೃಹಿಣಿಯರ ಪದ್ಯಪುಸ್ತಕವಾಗುವಂತೆ ಮಾಡಿಸಿ, ಪ್ರಚಾರ ಕಾರ್ಯವನ್ನು ಸಾಗಿಸಿ, ಇದನ್ನು ಇನ್ನು ಅನೇಕಾವರ್ತಿ ಛಾಪಿಸಿ ವಿಕ್ರ ಯಿಸುವ ಸುಯೋಗವನ್ನೊದಗಿಸಿ ಗ್ರಂಥಕರ್ತನ ಪರಿಶ್ರಮವನ್ನು ಸಾರ್ಥಕಗೊಳಿಸಿ, ಈ ಪದ್ಯಗಳ ಪಠನೆಯಿಂದ ತಮ್ಮ ಸುಕುಮಾರಿ ಯರ ನಡೆನುಡಿಗಳನ್ನು ತಿದ್ದಿಸಿ, ಕನ್ನಡ ಕವಿತಾಸೇವೆಯ ಫಲದಲ್ಲಿ ಸಹಭಾಗಿಗಳಾಗಿ, ದೇಶೋದ್ಧಾರಕರಾಗಬೇಕೆಂದು ಬಯಸಿ ನನ್ನೀ ಪ್ರಯತ್ನಗಳ ಫಲವನ್ನು ಶ್ರೀಮಧ್ವಪತಿ ಗೋಪಾಲಕೃಷ್ಣನ ಪಾದಪದ್ಮ ಗಳಿಗರ್ಪಿಸಿ ಈ ಪ್ರಸ್ತಾವನೆಯನ್ನು ಪರಿಸಮಾಪ್ತಿಗೊಳಿಸುವೆನು

ಇತಿ ಸಜ್ಜನ ವಿಧೇಯ,

ಬಳಂಜ,
ಶ್ರೀಮುಖ, 1933.

**ಎ. ನಾರ್ಣಪ್ಪಯ್ಯ, ಅಗಿದಕಳಿಯ,**
ನಾಲ್ಕೂರು ಬಳಂಜ ಫಿರ್ಕಾ ಶ್ಯಾನಭಾಗ

# ಅನುಕ್ರಮಣಿಕೆ.



## ಎರಡನೆಯ ಭಾಗವು.

॥ ಶ್ರೀಃ ॥



॥ ಶ್ರೀಜಗದೀಶ್ವರಃ ಪ್ರಸನ್ನಃ ॥

# ಕನ್ನಡ ಸ್ತ್ರೀಪದ್ಯಮಾಲಿಕೆ.

## ಮೊದಲನೆಯ ಭಾಗವು.

### ಕಂದಪದ್ಯ.

ಗಣನಾಥನ ಸ್ಮರಿಸುತ ಗುಣ ।
ಮಣಿಮಾಣಿಯ ನೆನದು ರಚಿಸಿದೆಂ ಕನ್ನಡದಾ ॥
ವನಿತೆಯರನುದಿನ ಪಾಡುವ ।
ಘನ ಶುಭ ಶೋಭನದ ಪದಗಳನುಮೋದಿಪುದುಂ ॥ ೧ ॥

## ನಿತ್ಯವಿಧಿಯ ಹಾಡುಗಳು.

೧ ರಾಗ ಸಾವೇರಿ, ರೂಪಕತಾಳ ] [ ಮಾಟಿ --ಉದಯಕಾಲದೊಳಿದು

ಕಮಲನಾಭನೇ । ಕೃಷ್ಣಾ । ವಿಮಲನಾಮನೇ ॥ ಸುಮನಸಾರ್ಚಿತಾ । ದೇವಾ । ಕಮಲಭವಪಿತಾ ॥ ೧ ॥ ಕರುಣವಾರಿಧೇ । ಚರಣ ಸೇರಿದೇ ॥ ಪೊರೆಯಬಾರದೇ । ಬಿರುದ ಮರೆವುದೇ ॥ ೨ ॥ ಶಕಟಭಂಜನಾ । ಭಕತಪೋಷಣಾ ॥ ಮುಕುತಿನಾಯಕಾ । ಭಕುತಿದಾಯಕಾ ॥ ॥ ೩ ॥ ಅಂಬುಜೋದರಾ । ಕಂಬುಕಂಧರಾ ॥ ಬೆಂಬಿಡದೆ ಪೊರೇ । ನಂಬಿದೆನು ಹರೇ ॥ ೪ ॥ ದಾನವಾಂತಕಾ । ದೀನಪಾಲಕಾ ॥ ಗಾನಮೋಹಕಾ । ಮೀನಬಾಲಕಾ ॥ ೫ ॥ ಸುಜನರಕ್ಷಕಾ । ಕುಜನಶಿಕ್ಷಕಾ ॥ ಅಜಸುರಾ

ರ್ಚಿತಾ । ಭಜಕಜನಸಹಿತಾ ॥ ೬ ॥ ಮಧುಮುರಾಂತಕಾ । ತ್ರಿದಶಪಾಲಕಾ ॥ ಮದನರಿಪುಸಖಾ । ಯದುಕುಲಾರ್ಭಕಾ ॥ ೭ ॥ ಶ್ರೀಯುಪ್ರೀಯನಾ । ರಾಯಣನೆ ಘನಾ ॥ ಜ್ಞಾನಸದ್ಗುಣಾ । ದೀನಮುನಿಜನಾ ॥ ೮ ॥

೨ ರಾಗ ಭೂಪಾಳಿ, ಝಂಪೆತಾಳ ] [ ದಾಟಿ —ಹರಯೇ ವಾಸುದೇವಾಯ

ಹರಿಯೇ ಶಿರಿವರನೆ ಪಾಲಿಸೆಮ್ಮಾ । ತಿಳಿದಂತೆ । ವರವೆ ನಾರಿಯರ ಧರ್ಮಾ ॥ ಹರಿಯೇ ಶಿರಿವರನೆ ಪಾಲಿಸೆಮ್ಮಾ ॥ ಪಲ್ಲ ॥ ಆರುಣೋದಯದ ಮುಂಚೆ ತೊರೆದು ನಿದ್ದೆಯನೆದ್ದು । ಹರಿಯ ಧ್ಯಾನಿಸಿ ಪತಿಯ ಚರಣಕೊಂದಿಸಿ ಮಡಿಯ । ನಿರದುಟ್ಟು ತಲೆಯನೊಪ್ಪವಗೈದು ಕುಂಕುಮವ । ಧರಿಸಿ ಕಡವುತಲೆ ದಧಿಯಾ ॥ ಹರಿಯ ಮಹಿಮೆಗಳ ಪದವರುಹುತ್ತ ದೇವರಿಂ । ಗೆರಡು ದೀಪವ ಹಚ್ಚಿ ಭರದಿ ಶಂಖವನೂದಿ । ಕರೆಗೆ ಪಾತ್ರೆಗಳೊಯ್ದು ಕರಚರಣ ಮೊಗತೊಳೆದು । ತುರುಕರುಗಳನು ಪ್ರೋಷಿಸೀ ॥ ಹರಿಯೇ ॥ ೧ ॥ ಮಂದಿರವ ಗುಡಿಸಿ ಮುದದಿಂದ ಗೋಮಯದಿ ಗೃಹ । ಚಂದದಿಂ ಸಾರಿಸುತ ಶುಚಿಗೈದು ಬಾಗಲಿನ । ಮುಂದ ರಂಗೋಲೆಯನು ಬರೆದು ಕುಸುಮಗಳಿರಿಸಿ । ವೃಂದಾವನಕ್ಕೆ ನಮಿಸೀ ॥ ಇಂದಿರೇಶನ ಪೂಜಪಾತ್ರಗಳ ಬೆಳಗಿ ಕ್ರಮ । ದಿಂದ ಪೂಗಳ ಕ್ಕೊದು ಗೋವ ಪಾಲನ ಕರೆದು । ಮುಂದೆ ಶಾಕವ ಮುರಿದು ಬಂದ ಸತಿಯರೂಳು ಬಲು । ಚಂದ ನುಡಿಗಳನೆ ನುಡಿದೂ ॥ ೨ ॥ ಒಡನೆ ಸ್ನಾನವಗಯ್ಯುತಡಿಗೆಯನು ವಿರಚಿಸುತ । ಜಡಜಾಂಬಕನ ಪೂಜಗೊದಗಿಸುತ ಸನ್ನಹವ । ಕೊಡಿಯಲೆಗಳಿಕ್ಕುತದರಡಿಗೆ ಮಂಡಲ ಬರೆದು । ಬಡಿಸಿ ಪತಿಯುಂಡ ಬಳಿಕಾ ॥ ತಡೆಯದಾ ಯೆಡೆಯಲ್ಲಿ ತಾನು ಭೋಜನಗಯ್ಯು । ತೊಡನೆ ತಾಂಬೂಲ ಪ್ರಿಯಗಿತ್ತು ತಾನುರ ಸವಿದು । ಕಡುಭಕುತಿಯಿಂದ ಬತ್ತಿಯ ವಿರಚಿಸುತ್ತ ಕಡ । ಲೊಡೆಯ ಧ್ಯಾನವ ಗೈವುದು ॥ ೩ ॥ ಮತ್ತೆ ಪತಿಯಾಜ್ಞೆಯನುವರ್ತಿಸುತ ಗೃಹಕೃತ್ಯ । ಕೃತ್ಯಗಳ ಗೈದಾಗ ಹೊತ್ತು ನೋಡುತಲಡಿಗೆ । ಯುತ್ತಮದಿ ರಚಿಸಿ ರವಿಯಸ್ತಮಿಸೆ ದೀವಿಗೆಯ । ಹಚ್ಚಿ ತುಳಸಿಯ ವಂದಿಸೀ ॥ ಇತ್ತ ಹರಿಪೂಜಯಾಗುತ್ತ ಭೋಜನಗೈದು । ಅತ್ತೆಮಾವರ ಪತಿಯ ಚಿತ್ತಕನುಸರಿಸಿ

ನಡೆ। ಯುತ್ತ ಹಸೆಯಿಕ್ಕಿ ಪದವೊತ್ತಿ ಸತಿಯೊತ್ತು ಮಲ। ಗುತ್ತ ರಮಿಸುತ್ತಲಿಹುದೂ ॥ ೪ ॥ ಈ ತೆರದಿ ನಾರಿಯರು ನೀತಿಯೊಳು ನಡೆದು ಬಲು। ಪ್ರೀತಿಯಿಂ ತಮ್ಮ ಬಾಲರನು ಪೋಷಿಸುತ ಶಿರಿ। ನಾಥನೆಂದೇ ತನ್ನ ಪ್ರೀತನನು ಭಾವಿಸುತ। ಮಾತ ಮೀರದೆ ಹಿರಿಯರಾ॥ ಪಾತಕಿಗಳೊಡನಿರದೆ ಪಾತಿವ್ರತ್ಯವ ಬಿಡದೆ। ಖ್ಯಾತಿಗೊಪ್ಪದಿರೆ ಯಮದೂತರಂಜುವರಬ್ಧಿ। ಜಾತೆ ತಾನೊಲಿದು ಪಾಲಿಪಳು ನಾರಾಯಣನ। ಪ್ರೀತ ಕಮಲಾದೇವಿಯೂ॥ ಹರಿಯೇ ಶಿರಿವರನೆ ಪಾಲಿಸೆಮ್ಮ॥ ೫ ॥

೩ ರಾಗ ಮೋಹನ, ಅಟತಾಳ ] [ ದಾಟಿ —ಚಿತ್ತಾಜನಯ್ಯನ ಚಿಂತಿಸೂ

ಮನುಮಧಾನಯ್ಯಾನಾ। ಮನದೀ ಧ್ಯಾನಿಸೇ ತನ್ನಾ। ಮನೆಯೊಳಿಟ್ಟನೂದಿನಾ । ಪೊರೆವಾತನಾ ॥ ಪಲ್ಲ ॥ ಅಂತಕಾನಾಳುಗಳಂತ್ಯಾ ಕಾಲಕೆ ಬೇಗಾ । ತಂತುಗಳಿಂದಾಗಾ ನಿಂತೂ ಬೇಗಾ॥ ಸ್ವಾಂತಾದೀ ಕಡು ರೋಷಾವಾಂತೂ ಬಿಗಿಯುವಾಗಾ। ಸಂತತಿಪತಿಯಾರೇ ಚಿಂತೆ ಬಿಡಿಸುವಾರೇ ॥ ಮನುಮಧಾನಯ್ಯಾನಾ ॥ ೧॥ ನಿರಯಾಕೊಯ್ಯುತ ಜೀವನರಿದೂ ಗೈದಿಹ ಭವಾ। ಪರಿಶೋಧಿಸುತಲೆ ವೈತರಣಿಯೊಳೂ॥ ಗರಗಸದೊಳೂ ಶಿರಾವಿರದಗ್ನೀಯೊಳಾಗೂರಾ। ಹುರಿದೂ ಪೀಡಿಸಾಲಾರೂ ಬರುವಾರೇ ತರಳಾರೂ॥ ೨॥ ಅಂಗಸಂಗದ ಸುಖಾದಂಗನೆಯರ ಮುಖಾ। ಹಿಂಗಾದೀಕ್ಷಿಸಿದಾ ದುಸ್ಸಂಗಾಕಾಗೀ॥ ಕಂಗಳನುರೆ ಕಿತ್ತೂ ಭಂಗಾಗೊಳಿಸಲತ್ತೂ। ತಂಗೀ ತಾತಂದ್ಯಾರೂ ಹಿಂಗೀಸಲಾರರೂ ॥ ೩ ॥ ಶ್ರೀರಮಾಧವದೇವಾ ಸೇರೀದವರ ಭವಾ। ದೂರಾಗಯ್ಯುವ ಕಾವಾ ಸುಖವಾಸೀವಾ॥ ನಾರಾಯಣನ ನಾಮಾ ಪಾರಾಯಣದಿ ಪ್ರೇಮಾ। ಧಾಮಾವೀಯುತಲೆಮ್ಮಾ ಪೊರೆಯೂವಾ ಶ್ರೀರಾಮಾ॥ ಮನುಮಧನಯ್ಯಾನಾ ॥ ೪ ॥ ಶ್ರೀಃ ॥

೪ ರಾಗ ಹರಿಕಾಂಭೋಜಿ, ಅಟತಾಳ ] [ ದಾಟಿ —ದಾರೀಯ ತೋರೊ

ಡಂಗೂರ ಸಾರೀದಾ ಯಮನೂ। ಪಾಪೀ । ಯಂಗನೆಯರ ತಂದೂ। ಭಂಗಗೊಳಿಸಿರೆಂದೂ॥ ಡಂಗೂರ ಸಾರೀದ ಯಮನೂ ॥ ॥ ಪಲ್ಲ॥ ಉದಯಕಾಲದೊಳೆದ್ದೂ ಪತಿಯಾ। ಪಾದ। ಪದುಮಕೊಂದಿ

ಸದೆ ನಿದ್ರಿಸುತಿಪ್ಪ ಸತಿಯಾ॥ ಮುದದಿ ನಿರ್ವಸನದಿ ಮುಯ್ಯಾ। ತೊಳೆವ। ಅಧಮಳನೆಳತಂದೂ ಸದೆಬಡಿಯುವುದೆಂದೂ॥ ಡಂಗುರ ॥ ೧ ॥ ಅತ್ತೆ ಮಾವಂದಿರ ಜರೆದೂ। ತನ್ನ। ಅತ್ತಿಗೆ ಮೈದುನರುಗಳನ್ನೆ ಬೈದೂ॥ ಉತ್ತುಮ ಹಿರಿಯರ ತೊರೆದೂ। ತಾನೂ। ಪೆತ್ತ ಮಕ್ಕಳ ಮಾರುವಳ ನೆಳದ್ಯೊರೆಂದೂ ॥೨॥ ಹರಿದಿನದುಪವಾಸ ಮರತೂ। ತನ್ನ ಯೆರೆಯು ನೊಡನೆ ಸುಖಭೋಗದಿ ಬೆರತೂ॥ ಪರರ ನಿಂದಿಸಿ ದೋಷಾವರಿತೂ । ಪಾಪ। ಕರಕೃತ್ಯಗೈವಳ ನರಕಾದೊಳಿಡಿರೆಂದು ॥ ೩॥ ವಲಿವ ಔಷಧಿ ಯಿಂದ ಪ್ರಿಯನಾ। ಮುಂಕು। ಗೊಳಿಸಿ ವಂಚಿಸಿ ಧನಾ ವಳವಿಂದಲ ವನಾ ॥ ಮುಲಮುಕ್ಕಳೊಳು ಮತ್ಸರವನೂ। ಗೈವ। ಕಲಹಗಾರ್ತಿಯು ಪಿಡಿದೆಳೆಯಿರೆಂದವನೂ ॥ ೪ ॥ ಗಂಡ ಸಿರ್ಧನಿಕನೆನ್ನುತಲೇ । ಬಲು ಕೊಂಡೆಯ ನುಡಿಯಾಡೀ ಕಿನಿಸ ತಾಳುವಳೇ॥ ಉಂಡ ಶೇಷಾನ್ನವಿಕ್ಕು ತಲೇ। ಲಜ್ಜ। ಭಂಡೆಯಾದವಳೆ ಸದ್‌ಗತಿಯಾ ಸೇರುವಳೇ ॥ ೫ ॥ ಉಡಲಿಲ್ಲ ಉಣಲಿಲ್ಲವೆನುತಾ। ಸೌಖ್ಯ। ಪಡಲಿಲ್ಲ ಸುಡಲಿ ಗಂಡನ ಭಾಗ್ಯವೆನುತಾ ॥ ಪಡದವರನು ಪಳೀಯುತ್ತಾ। ಲಿಪ್ಪ। ಬೆಡಗೂಗಾ ರ್ತಿಯ ಮುಡಿ ಪಿಡಿದೆಳದಿಡಿರೆಂದೂ ॥ ೬ ॥ ಹುತವಹನನು ಪಾದದಿಂ ದಾ। ನೊಂದಿ । ಸುತ ವೃತವತ್ಸ ಗೋವಿನ ಗವ್ಯ ತಿಂದಾ॥ ಅತಿಥಿ ಗನ್ನವನೀಯೆನೆಂದಾ। ಪಿಂತೆ ಗತಿಸಿದರಿಗೆ ನೊಂದಾ ಸತಿಯಾ ನೋ ಯಿಸಿರೆಂದಾ॥ ೭॥ ಫಲಶೋಧಿನದೆ ಪಾಕ ಗೈವಾ। ನಿತ್ಯ। ತುಲಸೀವೃಂ ದಾವನಕೆರಗದಲಿರುವಾ ॥ ಕಳವು ವಂಚನ ಹಿಂಸೆಗೈವಾ । ಸೊಸೆ । ಯೊಳು ಮತ್ಸರವ ಗೈವ ಲಲನೆ ಪಾತಕಿಯೆಂದೂ ॥ ೮ ॥ ಬಾಲಕರಿಗ ಬುದ್ಧಿಯೊರೆದೂ । ಪರಿ । ಪಾಲಿಸುತಾಲಯದೊಳು ಕೃತ್ಯಗೈದೂ ॥ ಭಾಳದಿ ಕುಂಕುಮ ಮೆರೆದೂ । ಗುಣ । ಶೀಲೆಯಾದವಳೆ ಸ್ವರ್ಗವ ಸೇರುವವಳೆಂದೂ ॥ ೯ ॥ ನಿರತಾ ಶ್ರೀಹರಿಯಾ ಧ್ಯಾನಿಸುತಾ। ಗುರು। ಹಿರಿಯರ ಮಾತ ಮೀರದೆ ಸಂತವಿಸುತಾ॥ ಶಿರಿನಾರಾಯಣ ಪ್ರೀತಸ ನುತಾ । ಬಾಳ್ವ । ಪರಮಪತಿವ್ರತೆಗೆರಗೂವದೆನ್ನುತ್ತಾ ॥ ಡಂಗೂರ ಸಾರೀದಾ ಯಮುನೂ ॥ ೧೦ ॥

ಶ್ರೀಃ ।

೫ ರಾಗ ಮಲಹರಿ, ಆದಿತಾಳ ] [ ದಾಟಿ —ಹರಿಯಾ ಶ್ರೀಚರಾಣಾವಾ

ಹರಿಯಾ ಪಾದಾಬ್ಜಾವಾ । ಸ್ಮರಿಸೂವೆನೂ ಶಿರೀ । ದೊರಿ ನಿನ್ನಾ ಕರುಣಾವೂ । ದೊರೇವಂದದೀ ॥ ಹರಿಯಾ ॥ ಪಲ್ಲ ॥ ಕಮಲಸಂಭವಾ ನಯ್ಯಾ । ಉಮೆಯುರಸನ ಪ್ರೀಯಾ । ಸುಮನಸಾರೊಡೆಯಾ ನಿನ್ನಯ ಪೂಜೆಯಾ ॥ ಕ್ರಮದೀ ಗಯ್ಯುತಾ ವೇದಾ । ಗಮವಾನಾಚರೀಸೂವಾ । ವಿಮಲಮತಿಯಾ ಪ್ರಿಯಾಗೀಯೂವಾದೆನುತಾ ॥ ೧ ॥ ಶಂಭುವೀಗತಿ ಪ್ರಿಯಾವೆಂಬಾ ಗೋವುಗಳಾ ವೊಲೆಯಾ । ನಂಬೇಗಯ್ಯುತಾ ಕರುಗ ಳುಂಬೂವಾಗಾ ॥ ತಂಬಿಗೆಯೊಳು ಹಾಲು ತುಂಬೀ ಕರೆವಾ ವೋಲೂ । ಸಂಭ್ರಮಾವನೂದಿನಾ ದೊರೆವಂದಾದೀ ॥ ೨ ॥ ನೂರೆಹಾಲೂ ಕರ ಯಾಲು ಸುರಿಸಿ ಬಾಯೊಳು ಜೊಲ್ಲು । ಕರದೊಳು ಬಟ್ಟಾಲು ಧರಿಸು ತ್ತಲೀ ॥ ಸುರುಚಿರಾಭರಣಂಗಳಿರುವ ಸುಂದರ ಬಾಲಾ । ಕರದೆನ್ನಾ ಬಳಿಗೆ ತಾ ಬರುವಂದದೀ ॥ ೩ ॥ ಕರುಣಾಸಾಗರ ನಿನ್ನಾ ಚರಣಸೇವೆಗ ಮುನ್ನ । ಪರಿಮಳಾ ಸುಮಗಳಾ ಅರಳುಗಳಾ ॥ ಅರುಣೋದಯದೊ ಳೆದ್ದೂ ತರುವಂತೇ ತರುಲತೇ । ವರಗೃಹಾದಿದಿರೂಳಾಗಿರುವಂದದೀ । ॥ ೪ ॥ ನೊಂದುಕೊಳ್ಳದೇ ಕ್ಷುಧೇಯಿಂದ ಬಂದವರಿಗೇ । ಅಂದದಿಂದ ನ್ನಪಾನವನೀಯುವಾ ॥ ಬಂಧುಗಳೊಳು ಸತೀವೃಂದಾದೊಳತೀಪ್ರೀತಿ । ಯಿಂವಲಾನಂದವಾ ಪಡುವಂದದೀ ॥ ೫ ॥ ಸತತ ಬೇಡುವೆ ಲಕ್ಷ್ಮೀ ಪತಿ ನಾರಾಯಣನೆನಾ । ಪತಿಗತಿಹಿತವಂತೇ ಯೆನಿಸುವಂತೇ ॥ ಕ್ಷಿತಿ ಯೊಳು ಪತಿವ್ರತಾ ಸತಿಯೆನ್ನಿಸುತಲಂತ್ಯಾ । ಗತಿಗೇ ಮೋಕ್ಷವಾ ನಿತ್ತೂ ಪೊರೆವಂದದೀ ॥ ಹರಿಯಾ ॥ ೬ ॥ ಶ್ರೀಃ ॥

ರಾಗ ಶಂಕರಾಭರಣ, ಅಟತಾಳ ] [ ದಾಟಿ —ಅಕ್ಕಾ ನಂದಗೋಪಾನಾ

ತಂಗೀ ಕೇಳಿದಿಯೇನೇ । ರಂಗಾನಾಥನು ತಾನೇ । ಹಿಂಗಾದೇ ಮಧುರೇಯನೇ । ಶೇರುವ ಜಾಣೇ । ಮಂಗಳಾಮಹಿಮ ಕಾಣೇ ॥ ॥ ಪಲ್ಲ ॥ ಪುಸಿಯನಾಡುವಳಲ್ಲ । ಪೊಸತೊಂದು ರಥಗೊಲ್ಲ । ವಿಸರಕೇ ರಿಯ ಬಾಗಿಲಾ ॥ ದೆಸೆಯೋಳ್ ನಿಂತಿದೆ ಮಾವ । ವಸತೀಗೊಯ್ಯಲು

ಕೋರ್ವರ್ಗ । ಪಿಸುಣಾ ಬಂದೀರ್ಪನಂತೇ ॥ ಆ ಕ್ರೂರನ । ಪಸರೂ
ಅಕ್ರೂರನಂತೇ ॥ ತಂಗೀ ॥ ೧ ॥ ಅಲ್ಲೀ ಮಲ್ಲರ ಕೂಟಾ । ಬಲ್ಲೀದ
ಗಜದಾಟಾ । ಬಿಲ್ಲಾಹಬ್ಬಂಗಳಂತೇ ॥ ಫುಲ್ಲಾನೇತ್ರನು ತಾನೇ ।
ಗೊಲ್ಲಾ ಬಾಲಕರೂಡನೇ । ನಿಲ್ಲಾದೈದುವನು ಕಾಣೆ ॥ ನಲ್ಲಯರೊಳ ।
ಗಿಲ್ಲ ಪ್ರೀತಿಯು ನಿನ್ನಾಣೆ ॥ ೨ ॥ ದೇವಿ ದೇವಕೀ ಮಾತೆ । ವಸುದೇವಾ
ಪಿತನಂತೇ । ಮಾವಾ ಕಂಸಾಖ್ಯಾನಂತೇ ॥ ದೇವದ್ವಿಜರೊಳಾತ । ಪಗೆ
ನಾಧಿಸುತ ಮತ್ತಾ । ಭೂಮಿಗೆ ಭಾರಾನಂತೇ । ಕುಲದ್ರೋಹಿಯಂತೇ ॥
ಭಾವವಾನರಿತೇ ಕಾಂತ ॥ ೩ ॥ ಮಧುರಾಪಟ್ಟಣಕ್ಕದಿ । ಮದಮುಖ
ರೊಳು ಕಾದೀ । ಸಪೆದೂ ಕಂಸನ ಕ್ರೋಧದೀ ॥ ಯದುವಂಶವನು
ಕಾಯ್ದು । ತ್ರಿದಶಾದ್ಯರನು ಪೊರದೂ । ಮುದದಿಂದ ಮೆರೆವಾ ಮುಂದೂ ॥
ಕೇಳಿದೇನಿಂದೂ । ವಿಧಿಪಿತನೀತನೆಂದೂ ॥ ೪ ॥ ಹಿತಬಂಧುಗಳ ಮೀರೀ ।
ಅತಿಪ್ರೀತಿಯೊಳು ಸಾರೀ । ನತಿಯೀತನೆಸುತ ನೇರೀ ॥ ಗತಿಶೂನ್ಯ ನತಿ
ಯರೀ । ಸ್ಥಿತಿಯೊಳಿರ್ಪುದು ಶೌರೀ । ಮತಿಗೆ ಸಂತಸವೇ ನಾರೀ ॥
ನಾರಾಯಣನಾ ಸ್ತುತಿಸೇ ಪಾಲಿಪಾನೀ ನಾರೀ ॥ ೫ ॥ ಶ್ರೀಃ ॥

೭ ರಾಗ ಯರಕಲಕಾಂಬೋಧಿ, ಝಂಪೆತಾಳ ] [ ದಾಟಿ — ವಳ್ಳಿತೀ ಶಕುನ

ಸರಸಿಜಾನನೆ ಕೇಳೆ ಸತಿಯ ನೀತೀ । ಸರಸದಿಂದಾಚರಿಸು ಶಿರಿಗ
ಪ್ರೀತೀ ॥ ಸರಸಿಜಾನನೆ ॥ ಪಲ್ಲ ॥ ಬಾಲ್ಯತನದೊಳು ಹಿರಿಯರಾಳುತನ
ದೊಳು ಬೆಳೆದು । ಶೀಲದಲಿ ಮೇಲೆನಿಸಿ ಬಾಳು ಮಗಳೇ ॥ ಕಾಲಕಾಲದಿ
ಗೈಯ್ಯುತಾಲಯದ ಕಾರ್ಯಗಳ । ಚಾಳಿ ಹೀಯಾಳಿಕೆಯ ತ್ಯಜಿಸು
ತಿರು ತರಳೇ ॥ ಸರಸಿಜಾನನೆ ॥ ೧ ॥ ಪಡೆದವರ ಪಿಡಿದವರ ನುಡಿಗೆಡಿಸಿ
ನಡೆಯದಿರು । ವಡಹುಟ್ಟಿದವರೊಡನೆ ಪ್ರೀತಿಸುತಿರೂ ॥ ನಡತೆಹೀ
ನೆಯ ಜೊತೆಯನೊಡಬಡದಿರವ್ವ ಪರ । ರೊಡವೆಗಿಡಬೇಡ ಮನ ನುಡಿ
ಸತ್ಯ ವಚನಾ ॥ ೨ ॥ ಪತಿಯ ಕೈಪಿಡಿದಂದು ಗತಿಯು ಮುಂದವ
ನಂದು ಸತತ ಶ್ರೀಪತಿಯೆಂದು ಸೇವೆಗೈದು ॥ ಖತಿಯು ತೋರದೆ
ನೆರೆಯ ಸತಿಯರೊಳು ಸೆಣಸದೇ । ಕ್ಷಿತಿಜೆಯಂದದಿ ಪತಿವ್ರತೆಯಾಗು

ಮುಗುಧೇ ೩ ॥ ಪತಿಸೇವೆಯೊಳ್ದಾಸಿ ಹಿತಬೋಧೆಯೊಳು ಮಂತ್ರಿ । ಕ್ಷಿತಿಯಂತೆ ಶಾಂತಿ ಶಯನದಲಿ ರತಿಯಾ ॥ ಅತಿಪ್ರೀತಿಯೊಳು ತಾಯ ಮತಿಯು ರೂಪದಿ ಶಚಿಯು । ಸ್ಥಿತಿಯನಿಂತಾರುಗುಣಯುತೆ ಪತಿವ್ರತೆಯೂ ॥ ೪ ॥ ಕೂಟದೊಳು ಕುಲಸತಿಯ ನೋಟದೊಳು ಹರಿಕಥೆಯ । ತೋಟದೊಳು ತರುಲತೆಯು ಬೆಳೆವ ಮತಿಯೂ ॥ ಆಟವೆಳೆತರಳರೊಳು ನಾರ ಸಚ್ಚರಿತೆಯೊಳು । ಊಟಕತಿಸವಿಪಾಕಗಳ ರಚಿಸು ತರುಣೀ ॥ ॥ ೫ ॥ ನಿಂದೆ ನುಡಿಯಾಡದಿರು ನಿಂದೆಗೀಡಾಗದಿರು । ಸಂದವರ ನೆನೆನದು ದುಃಖಿಸದಿರು ॥ ಕುಂದದಿರು ಬಡತನಕೆ ಬಂಧುಗಳ ದರುಶನಕೆ । ಪೊಂದದಿರು ಚಿಂತೆಯಾನಂದವಡು ಕಾಂತೇ ॥ ೬ ॥ ಅತ್ತೆಮಾವಂದಿರನು ಪೆತ್ತವರ ತೆರ ಕಾಣು । ತತ್ತಿಗೆಯರೊತ್ತಿನವರನುತ ಗ್ರಹಿಸೂ ॥ ಉತ್ತಮರ ಪದಕೆರಗು ಭಕ್ತಿಯಲಿ ಶಿರಬಾಗು । ಮತ್ತೆ ಸಾವಿತ್ರಿಯು ಚರಿತ್ರೆಗಳ ಪರಿಸೂ ॥ ೭ ॥ ಸೊಸೆಯೊಡನೆ ಮತ್ಸರವನೆಸಗದಿರು ಸುತೆಯಂತೆ । ನೊಸಲ ತಿದ್ದಿಸಿ ಮುಡಿಗೆ ಕುಸುಮ ಮುಡಿಸೂ ॥ ವಸನಾಭರಣಗಳೊಳು ಕುಶಲದೊಳಲಂಕರಿಸು । ಕಿನುರುಗೊಳ್ಳದಿರು ಸಂತತ ದಯುವ ದೋರೂ ॥ ೮ ॥ ವೃದ್ಧಾಪ್ಯದಲಿ ಪತಿಯು ಪೊದ್ದಿನಲ್ಲಿದ್ದು ನಯ । ಬುದ್ಧಿ ಮಕ್ಕಳಿಗೊರೆದು ಮರಿಮಕ್ಕಳಾ ॥ ಮುದ್ದಿಸುತ ಶುದ್ಧವಿದ್ಯೆಗಳ ಕಲಿಸುತ ನಿರತ । ತಿದ್ದಿಬೋಧಿಪರೊಳು ಪ್ರಬುದ್ಧೆಯೆಂದೆನಿನಾ ॥ ೯ ॥ ಆರೆರಡು ಭಾಗ್ಯ ಮವನಾರಿಸತಿ ಪಾಲಿಪಳು । ಭಾರತಿಯು ಸನ್ಮತಿಯನೊಲಿದೀವಳೂ ॥ ಶ್ರೀರಮಣಿ ಮುದಿಸುವಾಸಿನಿತನದೊಳಂತ್ಯದೊಳು । ನಾರಾಯಣನ ಪದವಿಗವಳನೊಯ್ಯುವಳೂ ॥ ಸರಸಿಜಾನನೆ ಕೇಳೆ ॥ ೧೦ ॥ ಶ್ರೀಃ ॥

೮ ರಾಗ ಸೌರಾಷ್ಟ್ರ, ಆದಿತಾಳ ] [ ದಾಟಿ —ಮಂಗಳ ಜಯಜಯ

ವೃಂದಾವನದೇವಿಗೊಂದಿಸುವೇ । ಮಂದರಧರಗತಿಪ್ರಿಯು ಭಾವೇ ॥ ವೃಂದಾವನದೇವಿ ॥ ಪಲ್ಲ ॥ ಅಂದು ಅಂಬರದೊಳು ನಿಂದು ತ್ರೈಲೋಕ್ಯವ । ಕುಂದಿಸುತಿಹ ಖಳಸುದತಿಯರಾ ॥ ವೃಂದವ ಕೂಡುತ ಖಳರನು ಕೊಲಿಸುತ । ವೃಂದೆಗೊಲಿದು ಹರಿ ನೆಲಸಿರುವಾ ॥ ವೃಂದಾ

ವನದೇವಿ ॥ ೧ ॥ ಮೂಲದಿ ಸಕಲ ತೀರ್ಥಗಳುಂಟು ನೆಲಸಲು। ಓಲಗಿಸಲು ಮಧ್ಯದಿ ಸುರರೂ ॥ ಮೇಲೆ ತುದಿಯೊಳಿಹುದಖಿಳ ವೇದಂಗಳು । ಶ್ರೀಲಕ್ಷ್ಮಿಶನು ನೆಲಸಿರುವಾ ॥ ೨ ॥ ಒಂದೊಂದು ದಳದೊಳಗೊಂದೊಂದು ಮೂರ್ತಿಗಳು । ವಂದಿಸುತಿಹ ನಿಜಭಕತರಿಗೇ ॥ ಸಂದೇಹವಿಲ್ಲದೆ ಸಲಿಸುತ ಸುಖವನು। ಇಂದಿರೆ ಸಹಿತಲೆ ನೆಲಸಿರುವಾ ॥ ॥ ೩ ॥ ಅರ್ತಿಯೊಳಗೆ ದೀಪಾರ್ತಿಗಳೆಲ್ಲವ । ಕಾರ್ತಿಕಮಾಸದಿ ಬೆಳಗಿಸುವಾ ॥ ಕೀರ್ತನೆಗೈದು ಪ್ರದಕ್ಷಿಣೆ ಮಾಡುವ । ಭಕ್ತರಿಷ್ಟಾರ್ಥವ ಪಾಲಿಸುವಾ ॥ ೪ ॥ ನಿರತ ಪ್ರದಕ್ಷಿಣೆಗಯ್ಯುವ ಸುಜನರ। ದುರಿತ ಭಯಂಗಳು ತೊಲಗಿಸುವಾ ॥ ಪರತರ ಪದವಿ ವೈಕುಂಠವನೀಯುವ। ಶಿರಿನಾರಾಯಣ ಪರದೈವಾ ॥ ವೃಂದಾವನದೇವಿ ॥ ೫ ॥

೯ ರಾಗ ನಾರಾಯಣಿ, ಅಟತಾಳ,] [ದಾಟಿ — ಮಹಿಷಾಸುರಮರ್ದಿನೀ

ಆರೋಗಣೆಯ ಮಾಡೋ । ಮಾಧವನೇ ॥ ಆರೋಗಣೆಯಾ ಮಾಡೋ॥ ಪಲ್ಲ॥ ಆರೋಗಣ ಮಾಡೋ ಮಾರಾಜನಕ ನಿನ್ನ। ನಾರಿ ಶ್ರೀಲಕ್ಷ್ಮಿಯಾನೊಡಗೂಡಿ ಮುದದೀ॥ ಆರೋಗಣೆಯ ಮಾಡೋ ॥ ॥ ಅನುಪಲ್ಲ ॥ ಅಂಡಜವಾಹನಾ ಕುಂಡಲಿಶಯನನೆ। ಮಂಡಲಗೈದು ರಂಗೋಲೆಯನಿರಿಸುತ್ತ । ಪುಂಡರೀಕಾಕ್ಷೀಯಾರೆಡೆಯಾನಿಕ್ಕಿದರೂ ॥ ಆರೋಗಣೆಯಾ॥ ೧॥ ನಂದಕಂದ ಮುಕುಂದನೆ ಕದಳಿಯ। ಚಂದದ ಎಳೆದಳಾಗಳನೆ ಬಾಡಿಸಿ ಚೌಕ। ವಂದದಿ ರಚಿಸಿ ದೊಣ್ಣೆಗಳನಿಕ್ಕಿದರೂ ॥ ೨ ॥ ತುಪ್ಪ ಪಾಯಸ ತೋವೆ। ವಪ್ಪುವ ಶಾಕವೆ। ತಪ್ಪದೆ ಕೋಸಂಬ್ರಿಯಪ್ಪಾ ಖಜ್ಜಾಯುವ। ಹಪ್ಪಳ ಶೆಂಡಿಗೇ ಇಕ್ಕಿವರೆಡೆಗೇ ॥ ॥ ೩ ॥ ರನ್ನದ ಹರಿವಾಣಾದೊಳಗನ್ನ ಚಿತ್ರಾನ್ನ । ದೊಣ್ಣೆಗಳೊಳು ಪರಮಾನ್ನ ರಸಾಯನ । ಬೆಣ್ಣೆಯೊಗ್ಗರಿಸೀದ ದಧ್ಯಾನ್ನಂಗಳನೂ ॥ ॥ ೪ ॥ ಫನಸ ಕದಳಿ ಚೂತ ಫನದವಳೀಕ್ಷುಗ। ಅನುನಾಸ ಜಂಬು ದಾಳಿಂಬೆ ಕಂಚಿಯಫಲ। ವನು ದ್ರಾಕ್ಷಿ ಖರ್ಜೂರ ಶರ್ಕರಾದಿಗಳಾ ॥ ॥ ೫ ॥ ಹಸುವಿಂದಾ ಗೈದ ಶೀಮೊಸರು ಶುಂಠಿಯ ನಿಂಬಾ। ರಸಗೆಕ್ಕಿದ ತಕ್ರ ಬಿಸಿಯಾಗಿರುವ ಕ್ಷೀರಾ। ಪೊಸಬಟ್ಟಲೊಳಗಿಟ್ಟ ರಸಪಾನ

ಕವನೇ ॥ ೬ ॥ ಖಾರಾ ಶಾವಿಗೆ ಲಾಡೂ ಚೀರಾ ಹೋಳಿಗೆ ಗುಂಡೂ। ಪೂರೀ ಕಡುಬು ವೇಣೀ ಜಿಲುಬಿ ಮುಂಡಿಗೆಯು ನೀ। ಶ್ರೀರಮೆಯೊಡನೆ ಭುಂಜಿಸು ನಾರಾಯಣನೇ ॥ ಆರೋಗಣೆಯಾ ॥ ೭ ॥ ಶ್ರೀಃ ॥

೧೦ ರಾಗ ನಾದನಾಮಕ್ರಿಯೆ, ಅಟತಾಳ ] [ ದಾಟಿ —ಮಾಪಾರತಿಯ ನೋ

ಮಂಗಳಾರತಿಯು ನೋಡುವ ಬನ್ನಿ। ನಮ್ಮ। ಅಂಗಜನಯ್ಯನ ವರಪೂಜೆಯಾ ॥ ಮಂಗಳಾರತಿಯು ನೋಡುವ ಬನ್ನೀ ॥ ಪಲ್ಲ ॥ ಮಘ ಮಘಿಸುವ ದಿವ್ಯ ಅಗರುಚಂದನ ಗಂಧ । ಮಿಗುವ ದಶಾಂಗ ಧೂಪ ದೂಳಿಡುತಾ ॥ ಸೊಗಸಿನ ಧೂಪಾರತಿಗೆ ಭಕ್ತಿಯೊಳಿಟ್ಟು । ಅಗಣಿತ ಮಹಿಮಗಾರತಿಯೆತ್ತುವಾ ॥ ಮಂಗಳಾರತಿಯಾ ॥ ೧ ॥ ತಾಳ ತಂಬುರಿ ಘಂಟೆ ಮೇಲಾದ ಝಾಗಂಟೆ । ನಾಲಾಗಿ ಶಂಖನಾದಂಗಳಿಂದಾ ॥ ಲೋಲಾಲೋಚನೆಯರು ಪಾಡುತಲಿರೆ ಚಾರು । ಮಾಲೆಯು ಧರಿಸಿದ ವೆಂಕಟನಾ ॥ ೨ ॥ ಲೋಕನಾಯಕ ಜಗದೀಶ ಮೂರುತಿಗೆ ಪ। ರಾ ಕೆಂದು ಸುಜನರು ನುತಿಸುತಿರೇ ॥ ನಾಕಾಪಾಲಕರಲ್ಲ ಜಯವೆಂದು ಧ್ವನಿಗಯ್ಯೆ । ಶ್ರೀಕಾಂತನಿಂಗೆ ಯೇಕಾರತಿಯಾ ॥ ೩ ॥ ಪಂಚವಾದ್ಯಂ ಗಳು ಮೊರಯೆ ದೀಪಂಗಳು । ಮಿಂಚಲು ತಾರಕಿಯುಂದದೊಳು ॥ ಪಂಚ ಕೂರುಮ ಪದ್ಮ ಕುರುಜಿನಾರತಿಗಳ। ಪಂಚಾಯುಧಗೆ ಶ್ರೀನಾರಾಯಣಗೇ ॥ ಮಂಗಳಾರತಿಯು ನೋಡುವ ಬನ್ನೀ ॥ ೪ ॥

## ದೇವರಪೂಜೆ

೧೧ ರಾಗ ಯರಕಲಕಾಂಬೋಧಿ, ಏಕತಾಳ ] [ ದಾಟಿ —ಸಂವತಸ್ಮರಿಸಿ

ತಮನ ಸಂಹರಿಸಿದ ಮೀನ ಪರಾಕೂ । ಕಮಠಮಂದರಗಿರಿ ಧರನೆ ಪರಾಕೂ॥ ಕುಮತಿಯು ಕೊಂದ ಭೂವರಹ ಪರಾಕೂ । ಅಮರ ವಂದಿತ ನರಸಿಂಹ ಪರಾಕೆಂದು । ಹೇಮದಾರಾತೀಯಾ ಬೆಳಾಗಿ ದಾರೂ॥ ಶೋಭಾನೆ॥ ೧ ॥ ಅದಿತೀಯೊಳುದಿಸಿದಾ ವಟುವೆ ಪರಾಕೂ। ಸದದೆ ಕ್ಷತ್ರಿಯರ ಭಾರ್ಗವನೆ ಪರಾಕೂ ॥ ಮದಮುಖರನು ಕೊಂದ ರಾಮ ಪರಾಕೂ । ಯದುಕುಲರನ್ನ ಶ್ರೀಕೃಷ್ಣ ಪರಾಕೆಂದು। ಪದು ಮಾದಾರತಿಯಾ ಬೆಳಾಗಿದಾರೂ ॥ ಶೋಭಾನೆ ॥ ೨ ॥ ಬತ್ತಲೆ

ನಿಂತಿಹಾ ಬೌದ್ಧ ಪರಾಕೂ । ಉತ್ತುಮ ಹಯವೇರಿದನೆ ಪರಾಕೂ ॥ ಸತ್ಯವತಿಯ ಸುತ ವ್ಯಾಸ ಪರಾಕೂ । ಹತ್ತವತಾರಿ ನಾರಾಯಣ ಪೊರ ಯಂದು । ಮುತ್ತಿನಾರಾತೀಯಾ ಬೆಳಗೀದರೂ ॥ ಶೋಭಾನೆ ॥ ೩ ॥

## ದುರ್ಗಾಪೂಜೆ.

೧೨ ರಾಗ ನೀಲಾಂಬರಿ, ಅಟತಾಳ ] [ ದಾಟಿ — ತಾರೆ ಪ್ರಸಾದವ ತಾಯೇ

ತೋರೇ ಪ್ರಸಾದ ಮುಕಾಂಬೇ । ಪದ । ಸಾರಿ ನಿನ್ನನು ಬೇಡಿ ಕೊಂಬೇ ॥ ವಾರಿಜಾಕ್ಷನ ರಂಬೆ । ಪೊಳೆವ ಚಿನ್ನದ ಬೊಂಬೇ । ಕಾರುಣ್ಯನಿಧಿ ನಿಮ್ಮ। ಕಮಲಹಸ್ತದೊಳೊಮ್ಮೇ ॥ ತೋರೇ ॥ ಪಲ್ಲ ॥ ಅಮ್ಮ ನಿಮ್ಮಯ ಮುಡಿಮ್ಯಾಲೇ । ಬಲು । ಘಮ್ಮೆನಿಸುವ ಸುಮ ಮಾಲೇ ॥ ಬೊಮ್ಮನಯ್ಯನ ಪದಕಮಲದೊಳರಳೂವಾ । ಸೊಮ್ಮಿನ ಶಿರದಿಂದಲೊಮ್ಮೆ ಕರಾಬ್ಜದಿ ॥ ತೋರೇ ॥ ೧ ॥ ಸತ್ವಗುಣದಿ ಲಕ್ಷ್ಮಿ ಯಾಗೀ । ಪರ । ತತ್ವವಾಗಿಹೆ ಮುಕ್ತಿಗಾಗೀ ॥ ನಿತ್ಯ ನಿನ್ನನು ಸ್ಮರಿ ಸುವ ಪತಿವ್ರತೆಯರಿ। ಗಿತ್ತು ಸಂತತಿ ಭಾಗ್ಯ ಸುಖವಿತ್ತು ಪೊರೆಯುವ್ವಾ ॥ ತೋರೇ ॥ ೨ ॥ ದುಷ್ಟದೈತ್ಯರ ಶಿರವರಿದೇ । ಮನ । ದಿಷ್ಟವ ಸುರರಿಗೆ ಸುರಿದೇ ॥ ಕಷ್ಟ ಭಯಂಗಳ ಕಳೆದು ಸಂತಸದಿಂದ । ಅಷ್ಟಭಾಗ್ಯವ ನಿತ್ತು ಪೊರೆಯೆ ಮುಕಾಂಬೆಯೇ ॥ ೩ ॥ ವಾಣೀ ನಿನ್ನಯ ಪಾದಾಂ ಬುಜಕೇ । ಫಲ । ಕಾಣಿಕೆಗಳನರ್ಪಿಸಿದಕ್ಕೇ ॥ ಜಾಣೇ ನಿನ್ನಯ ಚಾರು ವೇಣೀಯ ಕುಸುಮಾವಾ । ಪಾಣಿಯೊಳಿನಗೀಯೆ ಪರಮಮಂಗಳ ಕಾಯೇ ॥ ೪ ॥ ತೋಯಜಾಂಬಕಿ ತವ ಪದವಾ । ನಂಬಿ । ನಾನೆರ ಗುವೆ ಕೃಪೆಯೊಲವಾ ॥ ಪ್ರೀಯದೋಃತ್ತನ್ನ ಪೊರೆಯೆ ಮುಕಾಂಬೆಯೆ । ರಾಯ ನಾರಾಯಣ ಪ್ರೀಯೆ ಮಹಮಾಯೇ ॥ ೫ ॥ ಶ್ರೀಃ ॥

೧೩ ರಾಗ ಸುರುಟಿ, ಅಟತಾಳ ] [ ದಾಟಿ — ತೆಗ ನಿನ್ನ ಮುಸುಕಾನ

ನೀಡವ್ವ ಕುಸುಮಾವನೂ । ಬೇಡುವೆ ನಾನು । ನೀಡವ್ವ ಕುಸು ಮಾವನೂ ॥ ಪಲ್ಲ ॥ ನೀಡವ್ವ ಕುಸುಮಾವ । ಬೇಡೂವೆ ಕರುಣವ । ಮಾಡಿ ಸಂತಸದಿಂದ । ಮುಡಿಯ ಮಲ್ಲಿಗೇಯ ಹೂವಾ ॥ ನೀಡವ್ವ ॥

॥ ಅನುಪಲ್ಲ ॥ ಸಂತತ ಭಯಹರಾ । ಸಂತತಿ ಸುಖಕರ ॥ ಸಂತಸವೀಯುವಾ । ಸಂಪಿಗೆಹೂವಿನ ಸರವಾ ॥ ೧ ॥ ಹದಿಬದೆಯೆನಿಸುತ್ತ । ಮುದಿಮುತ್ತೈದೆಯಾಗುತ್ತ ॥ ಸದಮಲ ವೈಕುಂಠ । ಪದವೀಯು ದೊರವಂತೇ ॥ ೨ ॥ ಶಿರಿ ಸೌಖ್ಯ ಸೌಭಾಗ್ಯ । ಮೆರೆವ ಸಂತತಿ ಯೋಗ್ಯ ॥ ಕರವಾಗಿ ದೊರೆವಂತೇ । ಪರಿಪಾಲಿಸೌ ಮುಂತೇ ॥ ೩ ॥ ಹರಿನಾರಾಯಣಜಾಯೆ । ಪೊರೆಯುವ್ವ ಮಹಮ್ಮಾಯೇ ॥ ಕರವನೊಡ್ಡುವೆ ತವ । ಸಿರಸುಮನೀಯುವ್ವಾ ॥ ನೀಡವ್ವ ॥ ೪ ॥ ಶ್ರೀಃ ॥

## ಗಂಗೆತರುವುದು.

೧೪ ರಾಗ ಆರಭಿ, ಅಟತಾಳ ] [ ದಾಟಿ —ಸಂವಾದ

ಹರಿಪಾದಾನಖಜಾತೇ । ಹರಿಶಿರೋಮಂಡಿತೇ । ಪರಮ ಸಜ್ಜನಾಪ್ರೀತೇ । ದುರಿತವಿಘಾತೇ ॥ ಸುರನರೋರಗನಮಿತೆ ಮಂಗಳ । ಚರಿತೆ ವರಮುನಿವಿನುತೆ ಸದ್ಗುಣ । ಭರಿತೆ ದೋಷಕ್ಷಮಿತೆ ಹರಿಸುತೆ । ಸುರುಚಿರಾಲಂಕೃತೆ ವಿರಾಜಿತೆ ॥ ಯರಗೂವೇ ಮಾತೇ । ಶುಭದಾತೇ ॥ ಶೋಭಾನೆ ॥ ೧ ॥ ಬಲವೈರೀಯನೂ ಗೆಲ್ವಾ । ಛಲದೀ ಯಾಗವಾಗೈವಾ । ಬಲಿಯೊಳೂ ದಾನವಾ । ಇಳೆಯ ತ್ರೈಪದವಾ ॥ ಚಲುವ ವಾಮನ ನೂಲಿದು ಕೇಳಲು । ಖಳನು ಸಂತಸಗೊಳುತಲೀಯಲು । ಬೆಳದು ಧ್ರುವಮಂಡಲವು ಶಿರದೊಳು । ಪೊಳೆಯೆ ಪದತಳ ಬಲಿದು ನಖದೊಳ ॥ ಗಿಳಿದಾ ಜಾಹ್ನವೀಯೇ । ಪೊರೆ ತಾಯೇ ॥ ೨ ॥ ಇಂದ್ರನ್ನ ಪದವೀಯಾ । ಪೊಂದಾಲೆನ್ನುತ ರಾಯಾ । ನಿಂದೂ ಯಜ್ಞವಾ ಗಯ್ಯಾ । ಲಂದಾದೀತೇಯಾ ॥ ವೃಂದದೊಡೆಯ ಪುರಂದರನು ಕಳ । ವಿಂದ ಮಖಹಯ ತಂದು ಕಪಿಲನ । ಮುಂದಿರಿಸೆ ನೃಪನಂದನರು ಕ್ರುಧ । ದಿಂದರಸುತ ಮದಾಂಧರಿದ್ದರು ॥ ಮಂದಾಕಿನಿಯುವ್ವಾ । ಸಲಾಹವ್ವಾ ॥ ೩ ॥ ಸಗರಾಭೂಪನಾ ಸುತ । ರುಗಳಶ್ವವರಸುತ್ತಾ । ಜಗವೆಲ್ಲಾ ತಿರುಗುತ್ತಾ । ಮಿಗೆಮುಂದೈತರುತಾ ॥ ನಗಧರಾಂಶಜ ಕಪಿಲಮುನಿಪತಿ । ಯುಗಳ ಪದಬಳಿಯಶ್ವ ಕಂಡತಿ । ಪಗೆಯೊಳವದಿರು ಕೆಣಕಲಾ ಯತಿ । ದೃಗುಯುಗಾಗ್ನಿಗೆ ಭಸ್ಮವಾದರು ॥ ಸುಗುಣವಿತ್ತೆವ್ವಾ । ಸಲಹವ್ವಾ ॥ ೪ ॥

ಅಮರಾವಂದಿತೇ ನಿನ್ನಾ। ಗಮದಿ ಭೂಪಜರನ್ನಾ। ಸುಮನಸಪುರವನ್ನಾ। ಸೇರಿಸೆ ಮುನ್ನಾ ॥ ಕ್ರಮದಿ ತಪಗಯ್ಯಲು ಭಗೀರಥ। ಸುಮತಿಗೊಲಿದಿಳೆಗಿಳಿಯೆ ಗುಹಪಿತ। ವಿಮಲಶಿರದೊಳು ಧರಿಸೆ ಪೊರಡುತ। ಅಮಲ ಜಹ್ನುವಿನೊಡಲ ಸೇರುತ ॥ ಗಮಿಸುತ ನೃಪಸುತರಾ। ಸಲಹೀದೇ ॥ ॥ ೫ ॥ ಆಗಾ ಭೂಪನ ಶ್ರಮಾ। ಕಾಗೀ ಸದ್ಗುಣಧಾಮಾ। ಭಾಗೀರಥಿಯ ನಾಮಾ। ವಾಗೀ ರಂಜಿಸಿತೂ ॥ ಭೂಗಗನ ಪಾತಾಳಜೀವರ। ರೋಗ ದುರಿತ ಭಯಾದಿ ಬೇಸರ। ನೀಗಿ ಪರಮ ಜ್ಞಾನವನು ಚಿರ। ಭೋಗ ವಿಹಪರವೀಯುತಿಹ ವರ ॥ ಭಾಗೀರಥಿಯಮ್ಮಾ। ಸಲಹಮ್ಮಾ ॥ ೬ ॥ ಧ್ಯಾನಾದೀ ಕಲುಷಾವಾ। ಹಾನೀಗಯ್ಯುವೆ ಭವಾ। ಸ್ನಾನಾದೀ ರೋಗವಾ। ಪಾನಾದೀ ಕಳವೇ ॥ ದಾನವ್ರತನುಷ್ಠಾನ ತರ್ಪಣ। ಮೌನ ಜಪತಪವೆಲ್ಲ ನಿನ್ನಾ। ಧೀನ ಶ್ರೀನಾರಾಯಣನ ಸುತೆ। ಮಾನಯುತೆಯರ ಮಾತೆ ಪರಹಿತೆ ॥ ಧ್ಯಾನಿಸುವೇ ನಿಮ್ಮಾ। ಪೊರೆಯಮ್ಮಾ ॥ ಶೋಭಾನೆ ॥ ೭ ॥ ಶ್ರೀಃ ॥

## ಸಮಾರಾಧನೆ ಮಂತ್ರಾಕ್ಷತೆ.

೧೫ ರಾಗ ಧವಳಾರ, ಆದಿತಾಳ ] [ ದಾಟಿ —ಶ್ರೀಕರವಾದ ದ್ವಾರಕಿ

ಮೂಷಿಕವಾಹನನಡಿಗೆರಗೀ। ಆ ಶಾರದೆಯ ಪದಕೆ ಬಾಗಿ ॥ ಶೇಷಗಿರೀಶನ ಪೂಜಾರಾಧನ ॥ ತೋಷದೊಳೊರವೆನು ಮಂತ್ರಾಕ್ಷತೆಯನು। ಭೂಸುರರೂ ಗೈವಾ। ಪದಾನಾವಾ ॥ ಶೋಭಾನೆ ॥ ಪಲ್ಲ ॥ ಮಣಿಮಯಖಚಿತ ಸುಮಂಟಪದೀ। ವನಜಾಕ್ಷನ ಪೂಜಿಸಿ ಮುದದೀ ॥ ವಿನಮಿಸಿ ಕ್ರಮದಿ ಘನಸಂಭ್ರಮದೀ। ಅನುನಯದಿಂ ಭೋಜನ ದಕ್ಷಿಣೆಯೊಳು। ದಣಿದಾರೂ ದ್ವಿಜರೂ ಗುಣಯುತರೂ ॥ ೧ ॥ ರನ್ನದ ಚಾವಡಿಯನೆ ಗುಡಿಸೀ। ಬಣ್ಣದ ಚಾಪೆಗಳನೆ ಹಾಸೀ ॥ ಮಿಣ್ಣನೆ ಕುಳಿಸೀ ಮನ್ನಣೆಗೊಳಿಸೀ। ಹಣ್ಣು ಫಲವ ತಾಂಬೂಲವನೀಯುತ। ಸನ್ನುತೀಸಿದರೂ ವಧುವರರೂ ॥ ೨ ॥ ಹರಿವಾಣದಿ ಮಂತ್ರಾಕ್ಷತೆಯೂ। ಧರಿಸುತ ನಿಂದಿರೆ ದ್ವಿಜತತಿಯೂ ॥ ಹರಸುವ ಶ್ರುತಿಯೂ। ಪರಸುಖ ಸ್ಮೃತಿಯೂ। ಸುರುಚಿರ ಸ್ವರದೊಳು ವರೆಯುತ ಹರಸಲು। ಭರ

ದೊಳಕ್ಷತೆಯಾ ತಳೀದಾರೂ ॥ ೩॥ ಆ ಸಮಯದಿ ಸತಿ ತಾಂಬುಲವಾ। ನಾಸಿಕಕತಿಸುಖಕರ ಸುಮವಾ ॥ ದೋಷವಾ ಕಳೆವಾ ಭಾಸಕುಂಕು ಮವಾ । ತೋಷದೊಳೀಯು ಸುವಾಸಿನಿ ಬಾಳೆನು । ತಾಶೀರ್ವದಿಸ ದರೂ । ಸುದತಿಯರೂ ॥ ೪ ॥ ನ್ಯೂನವನೆಲ್ಲವ ಕ್ಷಮಿಸೆನುತಾ । ಶ್ರೀನಾರಾಯಣಗರ್ಪಿಸುತಾ ॥ ಮಾನಿನಿ ಸಹಿತಾ ಧ್ಯಾನಿಸೆ ನಿರತಾ । ಕ್ಷೋಣಿಯೊಳಷ್ಟೈಶ್ವರ್ಯ ಸುಖದಿ ಘನ । ಮಾನಿತರಾಗ್ಯೆನುತಾ । ಪರಾಸಿದಾರೂ ॥ ಶೋಭಾನೆ ॥ ೫ ॥ ಶ್ರೀಃ ॥

# ಹಸೆಕರೆಯುವ ಹಾಡುಗಳು

## ದಶಾವತಾರ ಕೃಷ್ಣಾವತಾರ.

೧೬ ರಾಗ ಸಾವೇರಿ, ಝಾಪುತಾಳ

ಕಮಲಾಂಬಕ ಸ್ಮಿತಕಮಲಮುಖಾ । ಕಮಲಸಂಭವಜನಕಾ । ಕೋಮಲಾ ಕಮಲಾರಿಧರಸಖಾ ॥ ಕಮಲಸದನಿಪ್ರಿಯ ಕಮಲಪದ ದ್ವಯಾ । ಕ್ರಮದಿ ಧ್ಯಾನಿಪರ ಹೃತ್ಕಮಲನಿವಾಸಿಯ ॥ ಬಾರೆಂದೂ ಹಸೆಗೇ ಕರವಾರೂ ॥ ಪಲ್ಲ ॥ ಲಲನೆ ಕೇಳೆಲೆ ಹಿಂದೆ ಛಲದಿ ವೇದವ ನ್ನೊಯ್ದಾ। ಖಳನ ಕೊಂದವನೇನೇ। ಜಲದೊಳು।ಮುಳುಗಿ ಬಂದವನೇನೇ। ಪೊಳಪಿನಾ। ಚಲುವ ಮೀನ ಕಾಣೇ ॥ ಖಳರುಪಟಳವನ್ನೆ ನಳಿನಜ ನೂರೆಯಲೂ । ಪಲಿದು ದೇವಕಿಯೊಳು ಜನಿಸಿದ ಸ್ವಾಮಿಯ ॥ ಬಾರೆಂದೂ ಹಾಸೇಗೇ ಕರವಾರೂ ॥ ೧ ॥ ಸಿಂಧುಮಥನದೊಳು ಮಂ ದರಗಿರಿ ಮುದ। ದಿಂದ ಪೊತ್ತನೇನೇ । ಸುಧೆ ಸುರ। ವೃಂದಕಿತ್ತನೇನೇ। ಖಳರನೂ। ಕೊಂದ ಕೂರ್ಮ ಕಾಣೇ॥ ಅಂದು ಮಥುರೆಯಿಂದ ಬಂದು ಗೋಕುಲದಲ್ಲೀ । ನಂದನಂದನನಾಗಿ ನಿಂದಿಹ ಸ್ವಾಮಿಯ ॥ ಬಾರೆಂ ದೂ॥ ೨ ॥ ಮೇದಿನಿಚೋರನ ಕಾದಿ ರದನದೊಳು। ಛೇದಿಸಿದವನೇನೇ। ಧರಣಿಗೆ । ಬೋಧಿಸಿದವನೇನೇ । ಭೂಧರಾ । ಆದಿವರಹ ಕಾಣೇ ॥ ಛೇದವೆಣಿಸಿ ಬಂದ ಕ್ರೋಧಿ ಶಕಟನನ್ನು। ಪಾದದಿ ವಧಿಸುತ ಮೆರದಿಹ ಸ್ವಾಮಿಯ ॥ ೩ ॥ ತರಳನು ಮೊರೆಯಿಡೆ ತ್ವರಿತದಿ ಸ್ತಂಭವ । ನಿರಿದು

ಬಂದನೇನೇ । ದುರುಳನ। ಭರದಿ ಕೊಂದನೇನೇ । ಶಿರಿವರಾ । ನರಹರಿ ಯುವ ಕಾಣೇ ॥ ದುರುಳೆ ಪೂತನಿ ವಿಷ ಧರಿಸಿದೆರಡು ಕುಚಾ । ಭರದಿ ಸವಿದವಳ ಸಂಹರಿಸಿದ ಸ್ವಾಮಿಯು ॥ ೪ ॥ ಬಲಿಯು ದಾನವ ಬೇಡಿ ನಲನ ಈರಡಿ ಮಾಡಿ । ಬೆಳೆದ ಮತ್ತನೇನೇ । ನಖದೊಳು । ಜಲವ ಪತ್ತನೇನೇ । ವಾಮನಾ । ಚಲುವ ರೂಪ ಕಾಣೇ॥ ಜಲಜಮುಖಿಯು ರಲ್ಲ ಜಲದೊಳಾಡುತಲಿರೆ । ಕಳವಿನೊಳ್ ವಸನವ ಕಳೆದಿಹ ಸ್ವಾಮಿಯು ॥ ೫ ॥ ಪರಶುವ ಧರಿಸುತ ದುರುಳನೃಪರ ಶಿರ । ವರಿದು ಮೆರದನೇನೇ । ಮಾತೆಯು। ಶಿರವ ತರಿದನೇನೇ । ಮುನಿವರ । ಪರಶು ರಾಮ ಕಾಣೇ ॥ ಉರಗನಂದದಿ ಬಂದ ತುರಗವೇಷದಿ ನಿಂದಾ । ದುರುಳರ ಪರಿಯುರಿದರಿದಿಹ ಸ್ವಾಮಿಯು ॥ ೬ ॥ ಮಾತೆಯು ಮಾತಿಗೆ ಭೂತಳ ತೊರೆದಿಹ । ಸೀತೆಯುರಸನೇನೇ । ದುರುಳರ। ಘಾತಿಸಿದವ ನೇನೇ । ರವಿಕುಲ । ಜಾತ ರಾಮ ಕಾಣೇ ॥ ವಾತರೂಪದಿ ಬಂದ ಪಾತಕಿಯನು ಕೊಂದ । ನೂತನಾಂಗಿಯರೊಳು ಪ್ರೀತಿಪ ಸ್ವಾಮಿಯು॥ ॥ ೭ ॥ ಗೊಲ್ಲರ ಸತಿಯರ ಗಲ್ಲಪಿಡಿದು ಸುಖ । ಸಲ್ಲಿಸಿದವನೇನೇ । ಮನೆಮನೆ। ಯಲ್ಲಿರುತಿಹನೇನೇ । ರುಕುಮಿಣೀ। ನಲ್ಲ ಕೃಷ್ಣ ಕಾಣೇ॥ ಬಿಲ್ಲ ಮುರಿದು ಖಳಮಲ್ಲರ ಸವರುತ । ಬಲ್ಲಿದ ಮಾವನ ಮಥಿಸಿದ ಸ್ವಾಮಿಯು ॥ ೮ ॥ ತ್ರಿಪುರರ ಸತಿಯರ ವಿಪುಳ ಪತಿವ್ರತ । ವಪಹರಿಸಿ ದನೇನೇ । ನಗ್ನದ। ವಪುವ ತಾಳ್ದನೇನೇ । ಖಳರಿಪೂ । ಚಪಳ ಬೌದ್ಧ ಕಾಣೇ ॥ ಕಪಟದಿ ಗೋಕುಲ ಚಪಲೆಯರಡೆಯೊಳು । ಉಪರಮಿಸುವ ತ್ರಿದಶಪನುತ ಸ್ವಾಮಿಯು ॥ ೯ ॥ ಕಲಿಯುಗದಲಿ ಖಳಕುಲನೃಪಬಳ ಗಕೆ । ಕುಲಿಶನಾದನೇನೇ । ವಾಜಿಯು। ಛಲದೊಳೇರ್ದನೇನೇ । ಕಲಿ ಹರಾ । ಚಲುವ ಕಲ್ಕಿ ಕಾಣೇ ॥ ಲಲನೆಯ ಲಿಖಿತಕೆ ವಲಿದೈದುತವಳ। ಕ ಳವಿನೊಳೊಯ್ಯುತ ವಲಿಸಿದ ಸ್ವಾಮಿಯು ॥ ೧೦ ॥ ಮೀನ ಕಚ್ಛಪ ಕ್ರೋ ಡ ಸೂನುಪಾಲಕ ವಟು । ದಾನಿಮುನಿಜನೇನೇ । ದಶರಥ। ಸೂನು ಕೃಷ್ಣ ನೇನೇ। ವಸನವಿ। ಹೀನ ಕಲ್ಕಿ ಕಾಣೇ॥ ಕ್ಷೋಣಿಯ ಭಾರವ ಮಾಣಿಸಿ ಪೊರೆಯುವ । ಶ್ರೀನಾರಾಯಣ ದಶವಿಧರೂಪನ॥ ಬಾರೆಂದೂ ॥ ೧೧ ॥

## ಕೃಷ್ಣಲೀಲೆ.

೧೭ ರಾಗ ನವರೋಜು, ಆದಿತಾಳ ] [ ದಾಟಿ — ಕೇಳಿದಿರೇ ಸುರರಿನಿತೂ

ಗಜವದನಾನನು ನೆನಸೀ । ಪಂ । ಕಜಭವರಾಣಿಯು ಸ್ಮರಿಸೀ ॥ ಭುಜಗಶಯುನಗೊಂದಿಸಿ ಶಿರಬಾಗಿಸೀ । ಗಜವರದನು ಸುಜನರಿಗೊಲಿ ವಂದದಿ ॥ ಬಾರೆಂದು ಹಸೇಗೆ ಕರವಾರು ॥ ಪಲ್ಲ ॥ ಸೃಷ್ಟೀಭಾರವ ನೋಡೀ । ಪರ । ಮೇಷ್ಠೀ ಧ್ಯಾನಿಸುತಿರಲೂ ॥ ಕಷ್ಟವ ನೀಗುವೆನೆ ನುತಭಯುವನಿತ್ತು । ಧಟ್ಟನೆ ದೇವಕಿಜಠರದಿ ಜನಿಸಿದ ॥ ಕೃಷ್ಣಾ । ಬಾರೆಂದೂ ಹಾಸೆಗೇ ಕರಾವಾರೂ ॥ ಶೋಭಾನೆ ॥ ೧ ॥ ಪೆತ್ತಾ ತಾಯ್ತಂದೆಯುರೀ । ಗುತ್ತುಮಾ ವಪು ತೋರೀ ॥ ಇತ್ತ ಭಾಷೆಯ ಸಲಿಸುವೆ ಖಳನನು ಕೊಂದೂ । ಚಿತ್ತದುಮ್ಮಾನವ ಕಳೆದು ಪೊರೆವ ನೆಂದಾ ॥ ಕೃಷ್ಣಾ । ಬಾರೆಂದೂ ॥ ೨ ॥ ಮಧುರೆಯಿಂದಲೆ ಪೋಗೀ । ಬಲು । ಮುದದೀ ಗೋಕುಲಕೊದಗೀ ॥ ಸದನಕ್ಕೈದಿದ ಪೂತನಿಯು ಮೊಲೆಯುನುಂಡು । ವದಗಿನಿಂದವಳನು ಸಂಹರಿಸಿದ ಶ್ರೀ ॥ ಕೃಷ್ಣಾ ॥ ೩ ॥ ಕಾಲಾಲಂದುಗೆಗೆಜ್ಜ । ಲೋಲಾಕುಂಡಲ ಪೊಳೆಯೇ ॥ ತೋಳ ಬಲದಿ ಖಳನೊಳಗದಲಿ ಬಂದ । ಖೂಳರ ಸದದು ಗೋಪಾಲರೊಳಾ ಡುವ ॥ ಕೃಷ್ಣಾ ॥ ೪ ॥ ಇಂದೂಮಂಡಲವಾ ಹ । ಣ್ಣೆಂದೂ ಕಯ್ಯಲಿ ಪಿಡಿದೇ ॥ ಇಂದ್ರನು ರೋಷದಿ ಸುರಿದರ ವೃಷ್ಟಿಯ । ನಂದು ಗೋವ ರ್ಧನ ಬೆರಳೊಳಗೆತ್ತಿದ ॥ ಕೃಷ್ಣಾ ॥ ೫ ॥ ಶಕಟಾಸುರನ ಕೊಂದೇ । ಬಕನುದರವ ಶೀಳ್ದೇ ॥ ಯುಕುತಿಯೊಳೈದಿದ ನಗನ ಸಂಹರಿಸಿದೆ ಮಕರಕುಂಡಲಧರ ಮದನಗೋಪಾಲನೇ ॥ ಕೃಷ್ಣಾ ॥ ೬ ॥ ಬಾಲಾ ಕಾತನದಲ್ಲೀ । ಬಹು । ಲೀಲೆಗಳನು ತೋರೀ ॥ ಹಾಲು ಮೊಸರು ಬೆಣ್ಣೆಯಾಲಯಂಗಳ ಪೊಕ್ಕು । ಜಾಲದಿ ಗೋಕುಲ ಬಾಲರೊಳಾಡಿದ॥ ಕೃಷ್ಣಾ ॥ ೭ ॥ ಕಾಳೀಯಾ ಫಣೆಯಲ್ಲೀ । ನಲಿನಲೀದಾಡುತಲೀ ॥ ಬಾಲೆಯರುಗಳ ಬಿನ್ನಪ ಕೇಳಿ ಉರಗನ । ಪಾಲಿಸಿ ಗೋವುಗಳ ಪೊರೆದ ಮಹಿಮ ಶ್ರೀ ॥ ಕೃಷ್ಣಾ ॥ ೮ ॥ ಗೊಲ್ಲಸತಿಯರೆಲ್ಲಾ । ಜಲ । ಕ್ರೀಡೆಯಾಡುತಿರೇ ॥ ಮೆಲ್ಲನೆ ಪೋಗಿ ಶೀರೆಯ ಕದ್ದು ಮರನೇರೀ ।

ಪುಲ್ಲನಯನೆಯರಿಗೊಲಿದು ಸುಖವನಿತ್ತಾ ॥ ಕೃಷ್ಣಾ ॥ ೯ ॥ ಬಾಲಾ ಗೊಲ್ಲರು ಸಹಿತಾ । ಕೊಂಬು । ಕೊಳಲುಗಳಾ ಧಾರಿಸುತಾ ॥ ಯೆಲ್ಲ ಮನೆಯ ಗೋವುಗಳನ್ನೆ ಬಿಡುತಾ । ಬಲ್ಲಿದರೊಳು ಸೆಣಸಾಡುತ ಮೆರದಿಹ ॥ ಕೃಷ್ಣಾ ॥ ೧೦ ॥ ಸರಸಿಜೋದ್ಭವ ನಿನ್ನಾ । ತುರು ಗೋಪ ಳರು ಸಹಿತಾ ॥ ಮರೆಸಿ ಕದ್ದೊಯ್ದರೆ ತುರುಕಾವರು ಸಹಾ । ವಿರಚಿಸಿ ಪುರದೊಳು ಮೆರಸಿದ ಸ್ವಾಮಿಯು ॥ ಕೃಷ್ಣಾ ॥ ೧೧ ॥ ಧರೆಯೊಳುತ್ತಮ ರಜತಾ । ಪುರದೊಳೂ ಸ್ಥಿರವಾಸಾ ॥ ಗುರುಮಧ್ವಮುನಿ ಶಿಷ್ಯ ವರರ ಪೂಜೆಯುಗೊಂಬಾ । ಶಿರಿನಾರಾಯಣ ಜಯುಜಯುವೆನುತಲೆ ॥ ಕೃಷ್ಣಾ ॥ ೧೨ ॥ ಶ್ರೀಃ ।

## ವಿಷ್ಣುಸ್ತುತಿ.

೧೮ ರಾಗ ಜಂಗಲ್, ಆದಿತಾಳ ] [ ಮಾಟಿ —ಸುರವರವಂದಿತ ಪರಸು

ಸಾಮಜವರದನೆ ತಾಮರಸಾಕ್ಷನೆ । ಕಾಮಿತದಾಯುಕನೇ ॥ ಭೂಮಿಜೆಪ್ರಿಯು ಸುರಸ್ತೋಮಸುಖಂಕರ । ಸ್ವಾಮಿಯೆ ಹಸೆಗೇಳ್ಳೈ ॥ ॥ ಪಲ್ಲ ॥ ಕುಸುಮದಳಾಕ್ಷನೆ ಅಸುರಾಂತಕನೇ । ಶಶಿಮುಖಿ ರಮೆ ಯೊಡನೇ ॥ ವಸನವನಿಕ್ಕಿದ ಹೊಸಹಸೆಮಣೆಗೇ । ಕುಶಲದಿ ದಯು ಮಾಡೈ ॥ ೧ ॥ ನಂದನಕಂದ ಮುಕುಂದ ಜನಾರ್ದನಾ । ಇಂದು ವದನ ಬಾರೈ ॥ ಮಂದರಧರ ಮಧುಸೂದನ ಮುರಹರ । ಸುಂದರ ಹಸೆಗೇಳ್ಳೈ ॥ ೨ ॥ ನೀರಜಭವಪಿತ ಮಾರನ ತಾತಾ । ಶ್ರೀರಮೆಯುಳ ಪ್ರೀತಾ ॥ ನಾರಾಯುಣ ಸುರವಾರವಿನುತ ಧೀರ । ಧೀರನ ಹಸೆ ಗೇಳ್ಳೈ ॥ ೩ ॥ ಶ್ರೀಃ ॥

## ೨೪ ನಾಮಸ್ತುತಿ.

೧೯ ಮಧ್ಯಮಾವತಿ, ಆದಿತಾಳ

ಕೇಳಲಾರೆನು ದೂರಾ । ಕೇಶವ ಬಾರೋ । ತಾಳಲಾರೆನು ನಾರಾಯುಣ ಬಾರೋ । ಹಾಳುಮಾಡುವದಿಲ್ಲ ಮಾಧವ ಬಾರೋ । ಶೀಲಾ ಮೂರುತಿಯೆ ಶ್ರೀಗೋವಿಂದ ಬಾರಂದು ॥ ನಾರಿಯುರೂ

ಹಸೇಗೇ ಕರಾವಾರು ॥ ೧ ॥ ದುಷ್ಟತನವ ಬಿಡೂ ವಿಷ್ಣುವೆ ಬಾರೋ। ದಿಟ್ಟನೆನಿಪ ಮಧುಸೂದನ ಬಾರೋ ॥ ಕಟ್ಟಿಹಾಕುವದಿಲ್ಲ ತ್ರಿವಿಕ್ರಮ ಬಾರೋ। ಸೃಷ್ಟಿಯ ಬೇಡಿದ ವಾಮನನೆ ಬಾರೆಂದು ॥ ಕಟ್ಟಾಣಿಯ ಹಾರ್ಸೇಗೇ ಕರಾವಾರು ॥ ೨ ॥ ಬಿಡದೆ ಮೊಲೆಯನುಂಡ ಶ್ರೀಧರ ಬಾರೋ। ಕುಡಿವೆ ಹಾಲನೆ ಹೃಷಿಕೇಶನೆ ಬಾರೋ ॥ ಬಡವಾರಾಧಾರಿ ಪದ್ಮನಾಭನೆ ಬಾರೋ। ಒಡೆಯ ವೆಂಕಟದಾಮೋದರ ಬಾರೆಂದು ॥ ಮಡದಿಯರೂ ಹಾಸೇಗೇ ॥ ೩ ॥ ಶಂಖವ ಪಿಡಿದ ಸಂಕರುಷಣ ಬಾರೋ। ಶಂಕೆಯಿಲ್ಲದ ವಾಸುದೇವನೆ ಬಾರೋ ॥ ಶಂಕರಪ್ರಿಯ ಪ್ರದ್ಯುಮ್ನನೆ ಬಾರೋ। ಪಂಕಜನಾಭ ಅನಿರುದ್ಧನೆ ಬಾರೆಂದು ॥ ಶಂಕಿಣಿಯರು ಹಾಸೇಗೇ ॥ ೪ ॥ ಪುರುಷೋತ್ತಮ ಪುಣ್ಯಪುರುಷನೆ ಬಾರೋ। ನಿರತವು ಪೊರೆವ ಅಧೋಕ್ಷಜ ಬಾರೋ ॥ ನರಸಿಂಹಮೂರುತಿ ಹರಿಯೆ ನೀ ಬಾರೋ। ನರಮೃಗರೂಪ ಅಚ್ಯುತನೆ ನೀ ಬಾರೆಂದು ॥ ತರುಣಿಯರೂ ॥ ೫ ॥ ನಸುನಗೆಮೊಗದ ಜನಾರ್ದನ ಬಾರೋ। ಕುಸುಮನಾಭನೆ ಶ್ರೀ ಉಪೇಂದ್ರನೆ ಬಾರೋ ॥ ಬಿಸರುಹ ನೇತ್ರನೆ ಹರಿಯೆ ನೀ ಬಾರೋ। ಕುಶಲದಿ ಕೃಷ್ಣ ನಾರಾಯಣ ಬಾರೆಂದು ॥ ಶಶಿಮುಖಿಯರು ಹಸೆಗೇ ಕರಾವಾರೂ ॥ ಶೋಭಾನೆ ॥ ೬ ॥

## ಲಕ್ಷ್ಮೀ ಮತ್ತು ತ್ರೈಶಕ್ತಿಸ್ತುತಿ.

೨೦ ರಾಗ ಕಾಮೋದರಿ, ತ್ರಿಪುಟತಾಳ ] [ ದಾಟಿ —ಹರಿನಾರಾಯಣ ಪ್ರೀಯೆ

ಹರಿಯಾ ಮೋಹದ ಪ್ರೀಯೋ। ಪೊರೇಯುವ್ವಾ ಮಹಮ್ಮಾಯೋ ॥ ಸರಸಿಜಾಸನ ತಾಯೋ। ಸರಸಿಜಾನಿಲಯೋ ॥ ಸುರವರಾರ್ಚಿತೆ ಸುಜನ ಸನ್ನುತೆ। ಸರಸಗುಣಯುತೆ ಶರಣಜನಹಿತೆ। ಶರಧಿಸುತೆ ಸಾರಸವಿಮೋಹಿತೆ। ಪರಮಪತಿವ್ರತೆಯರಿಗೆ ಮಾತೆಯೆ ॥ ಶರಣೆಂದೂ ಹಸೇಗೆ ಕರೇವಾರೂ ॥ ಶೋಭಾನೆ ॥ ೧ ॥ ಪಂಚಾಯುಧನ ಪ್ರೀಯೆ । ಮಿಂಚುವ ಲಕ್ಷ್ಮಿಯೆ। ಪಂಚಾಸ್ಯಗಮನೆಯೆ ಪಂಚಾಸ್ಯಾಜಾಯೋ ॥ ಅಂಚೆಯೊಳು ಸಂಚರಿಸುತಿರುವ ವಿ। ರಿಂಚಿಮಾತೆಯೆ ತ್ರಿಗುಣಮೂರ್ತಿಯೆ। ಚಂಚಲವ ಪರಿಹರಿಸೆ ಮನ್ಮನ। ಮಂಚದೊಳು ನೆಲಸಿರು

ಮುಕಾಂಬೆಯು ॥ ಅಂಚಿಗಮನೆಯರೂ ಕರೇವಾರೂ ॥ ೨ ॥ ಕಂಬು ಕಂಧರ ನಿಜ ಕುಂಭಪಯೋಧರ । ನಂಬಿವೆ ಸುಮಹಾರೇ ನಯನ ಶೃಂಗಾರೇ ॥ ಅಂಬುಜಾಕ್ಷಿಯು ಶಂಭುಸುಖಪ್ರಿಯು । ನಂಬಿದರಿಗಿಷ್ಟಾರ್ಥವೀವೆಯು । ಬಂಬಿಡದೆ ಸಜ್ಜನರ ಪೊರವೆಯು । ಅಂಬ ಮದಮಾತಂಗಗಮನೆಯೇ ॥ ಇಂಬೂಗೊಟ್ಟಿಮ್ಮಾ ಪೊರೇಯಮ್ಮಾ ॥ ೩ ॥ ಮಧುಮುರಾಂತಕರಾಣೀ । ಮೃದೂಕರ ಫಣೀವೇಣಿ । ಮದನಾಮರ್ದನಾ ಭಗಿನೀ । ಪದುಮಾಸುಪಾಣೀ ॥ ಮುದದಿ ಧ್ಯಾನಿಪೆ ಸುಜನರೊಳು ಕೃಪೆ । ಯುದಿಸಿ ಸಂತತಿ ಸಿರಿಸುಖೋನ್ನತಿ । ಮುದವನೀಯೇ ಮದನಮಾತೆಯು । ಸದಯು ನಾರಾಯಣನ ಮಡದಿಯು ॥ ಸುದತಿಯರೂ ಹಸಗೇ ಕರೇವಾರೂ ॥ ೪ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ಶುಭಶೋಭನ ವಿಧಿಗಳಿಗೆ ಬೇಕಾದ ಹಾಡುಗಳು.

### ಶುಭಕಾರ್ಯದಲ್ಲಿ ಕ್ಯಾಪಲ್ಲ ಮುರಿಯುವದು.

೨೧ ರಾಗ ಮೋಹನ, ಆದಿತಾಳ ] [ ದಾಟಿ — ಚಿತ್ತಾ ಜನಯ್ಯನ ಚಿಂತಿಸೂ

ಶರಣೆಂಬೆ ಗಣನಾಥಾ । ಚರಣಯುಗಕೆ ಮತ್ತಾ । ಬರುವ ವಿಘ್ನವನತ್ತಾ । ಹರಿಸೆನ್ನುತಾ ॥ ಸ್ಮರಿಸುವೆ ಶಾರದೆಯಾ । ನೊರವೆ ಮಂಗಳ ಕಾರ್ಯ । ಕುರುತರ ಫಲಕಾಯಾ । ಮುರಿವ ಹಾಡನು ಸರಿಯಾ ॥ ಗಿರದ ದೋಷವನೂ ಕ್ಷಮಿಸುವದೂ ॥ ಶೋಭಾನೆ ॥ ೧ ॥ ಇಂದೀರ ಸತಿಪ್ರೀಯಾ । ಗಂದೂ ಲಗ್ನವ ಗಯ್ಯಾ । ಲೆಂದೂ ಕೂಡಿದರಾಪ್ತಾ । ಬಂಧುಗಳೂ ॥ ಬಂದೂ ಬೆಳಗೂರ್ಝಾವ । ತಂದೆತಾಯ್ಗಳೂ ದೇವ । ಮುಂದಿಟ್ಟೊ ದ್ವಯಾಫಲವಾ । ಪೊಂದಿಸುಮಂಗಳವಾ ॥ ನೆಂದೆರಗು ತೆಲ್ಲಾ ನಮಿಾಸಿದರೂ ॥ ೨ ॥ ಫುಲ್ಲಾನೇತ್ರೆಯರುಗ । ಳೆಲ್ಲಾ ನೆರದು ಬೇಗಾ । ಮಲ್ಲಿಗೆ ಮುಡಿದಾಗ । ಳಲ್ಲಿರುವಾ ॥ ಚಲ್ವೀನೀಳಿಗೆ ಮೊಗಾ । ದಲ್ಲೀ ಮಂಡಿಸುತೀಗ । ಮುಳ್ಳುಸೌತೆಯಕ್ಯಾಗ । ಳೆಲ್ಲಾ ಕೊಚ್ಚಿದರಾಗಾ ॥ ಉಲ್ಲಾಸದಿಂದಾ ಸತೀವೃಂದಾ ॥ ೩ ॥ ಬಾಳೆಕಾಯನೆ

ಕ್ಕೊದು । ಶೀಳೀ ಖಂಡವ ಗೈದೂ । ಮೇಲೆ ವಾರಿಯು ಹ್ಯೊದೂ । ಶುಚಿಯುಗೈದೂ ॥ ತೋಳುದ್ದ ಹೀರಯಾ । ಮೇಲಿದ್ದ ಧಾರೇಯು । ಕೇಳುತ್ತ ಕ್ಕೊದು ಕ । ರಾರೀಯೊಳಿರೀದಾರೂ ॥ ವಾರೀಜಾಕ್ಷನನೂ ಸ್ಮರಿಸುವಾರೂ ॥ ೪ ॥ ವನಿತೇಯಾರತೀ ಮೋದ । ವನೆ ತಾಳಿ ಪಣ್ಣಾದಾ । ಪನಸ ಚೂತವ ಕ್ಕೊದಾ । ರನುವಿನಿಂದಾ ॥ ಘನಚೀಸೀ ಸೌತೆಕಾ । ಯನು ಜಾಲೀಬೃಹತಿಗ । ಳನು ಚೌಳೀ ಹಾಗಲಾ । ತೆನೆಯುಲಸಂದಿಯಾ ॥ ವೊನೆಯುವರೆಗಳಾ ಮುರಿದಾರೂ ॥ ೫ ॥ ಹರಿಗೆ ಸಮ್ಮತವಾಗೀ । ಶಿರಿಗೇ ಸಂತಸವಾಗೀ । ಸುರವರರಿಂಗೆ ಸಂ । ತೃಪ್ತಿಯಾಗೀ ॥ ನೆರದ ಸಮಸ್ತರೀ । ಗುರುತರ ಸವಿಯಾಗೀ । ವಿರಚಿ ತವಾಗಲೀ ಪರಿಪರಿ ಶಾಕ ॥ ಪಂದಿರದ ಶ್ರೀಹರಿಯಾ ಸ್ಮರೀಸಿದಾರೂ ॥ ॥ ೬ ॥ ನಗೆಮೊಗಾದಬಲೆಯು । ರೂಗುಮಿಗೆಯಿಂ ಪಲ್ಲ್ಯ । ಬಗೆಬಗ ವಿಧವಾಗೀ । ಹಚ್ಚ್ಯುವಾಗಾ ॥ ಸುಗುಣಾ ನಾರಾಯುಣಾ । ಹೂಗಳೀ ಕೇಯು ಸುಗಾನಾ । ಮಿಗೆವಾಡೂತದರನ್ನ । ಮುಗಿಸಿದರಾಕ್ಷಣಾ ॥ ಪಗಲಾಗದ ಮುನ್ನಾ ಸುಗೂಣೆಯರೂ ॥ ಶೋಭಾನೆ ॥ ೭ ॥

## ನಾಮಕರಣ ಅನ್ನಪ್ರಾಶನ

೨೨ ರಾಗ ಜಗನ್ಮೋಹನ, ರೂಪಕತಾಳ ] [ ದಾಟಿ —ರಂಗನಾಯಕಾ

ಬೆಣ್ಣೇಯು ಮೆಲು ಬಾಲಾ । ರನ್ನಾ ಸುಗುಣಶೀಲಾ । ಉಣ್ಣಾ ಬಾರದೆ ಕಮಲಾ । ಕನ್ನಿಕಾಲೋಲಾ ॥ ಪಲ್ಲ ॥ ಕಣ್ಣೆತ್ತಿ ನೋಡಾದೆ ಕಣ್ಣೀರ ಸುರಿಪೂದೇ । ಬಣ್ಣವಿದಲ್ಲವು । ಹೊನ್ನನೀವೆವು ನಾವೂ ॥ ಬೆಣ್ಣೇಯು ॥ ಅನುಪಲ್ಲ ॥ ಮಾತೇಯುಯ್ಯನು ಬಂದ । ನೀ ತೋರು ನಗೆಯಿಂದಾ । ಖಾತೀಯೊಳಳುವಂದಾ । ವೇತರ ಚಂದಾ ॥ ಪೂತನಿ ಯನು ಕೊಂದಾ । ನೂತನಬಾಯಿಂದ । ನೀ ತುತ್ತುಗೊಳೆ ತಂದಾ । ಶಾತಕುಂಭರವಿಂದಾ ॥ ಬೆಣ್ಣೇಯು ॥ ೧ ॥ ಹೆತ್ತವ್ವೆಯುಳ ಮಾತೇ । ಮತ್ತೆ ಬಂದಳ್ ಖ್ಯಾತೇ । ಎತ್ತಾ ನೋಡುತ ಕೂತೇ । ಎತ್ತಿ ನಾ ಸೋತೇ ॥ ಚಿತ್ತುತ ವರಳನ್ನು ಮತ್ತಿಮರಗಳನ್ನೂ । ಕಿತ್ತುಹಾಕಿದ ಯೆನ್ನು । ತಿತ್ತಾಳು ವಂಟಿಯುನೂ ॥ ೨ ॥ ಜನನಿಜನಕರನ್ನೂ । ವಿನಯ

ದೀಕ್ಷಿಸು ಸೂನು । ದನುಜದಲ್ಲಣ ನೀನೂ । ಅನುಮಾನವೇನೂ ॥ ಘನವಾದ ಕಿನಿಸೇನು । ಮನುಜನಲ್ಲವೆ ನೀನೂ । ಉಣಲೀಕೊಲ್ಲೆಯಿದೇನು । ಕನಕಾವನೀವೆನೂ ॥ ೩ ॥ ಅಣ್ಣಾ ಬಂದಿಹ ನೋಡೂ । ಕಣ್ಣೆತ್ತಿ ಮಾತಾಡೂ । ಚಿನ್ನದುಂಗುರ ಬೇಡೂ । ಮನ್ನಣೆ ಮಾಡೂ ॥ ಮಣ್ಣಾ ಮೆಲುವ ಬಾಯಾ । ನಿನ್ನು ಕಾಣಲು ತಾಯಾ । ಕಣ್ಣಿಗೆ ಭುವನೀಯಾ । ವನ್ನು ತೋರಿದೆ ಮಾಯಾ ॥ ೪ ॥ ಊರನಾರಿಯರೆಲ್ಲಾ । ಹಾರ ತಂದಿಹರಲ್ಲಾ । ತೋರೆ ಲೀಲೆಗಳೆಲ್ಲಾ । ಶೇರುತದಲ್ಲಾ ॥ ಪಾರುಪತ್ಯದೊಳೋರ್ವಾ । ಧೀರಾನು ವೀಳ್ಯಾವಾ । ನಾರೀಮಣಿಯರ್ಗೀವಾ । ಭಾರವ್ಯಾತೆನ್ನುವಾ ॥ ೫ ॥ ಮುತ್ತೈದೇಯರು ಕೂಡೀ । ರತ್ನಾದಾರತಿ ಮಾಡೀ । ಮುತ್ತಿನಾಕ್ಷತೆಯನ್ನೂ । ಶಿರಕೆ ನೀಡೀ ॥ ಹೆತ್ತಾವರಿಗೆ ವೀಳ್ಯ । ವಿತ್ತು ಕಸ್ತೂರಿಯ । ಮಸ್ತಕಕಿಡುತಲೆ । ಎತ್ತಿದರಾರತಿಯ ॥ ೬ ॥ ಭೂಸುರೋತ್ತಮರ್ ನಿನ್ನಾ । ಭಾಸವು ಮೂರ್ ಬಣ್ಣಾ । ಭಾಸೀಸ ಶ್ರೀಕೃಷ್ಣಾ । ನೀ ಸಣ್ಣ ಸುಗುಣಾ ॥ ಶ್ರೀಶಾ ನಾರಾಯಣಾ । ವೇಶಾನೀಯಭಿಧಾನಾ । ಲೇಸೆಂದಕ್ಷತೆಯನ್ನ । ಸೂಸಿವರೆಲೆ ಚಿಣ್ಣಾ ॥ ಬೆಣ್ಣೇಯಾ ॥ ೭ ॥ ಶ್ರೀಃ ॥

## ಜೋಗುಳ.

೨೩ ರಾಗ ಯದುಕುಲಕಾಂಬೋಧಿ, ಅಟತಾಳ ] | ದಾಟಿ -- ಜೋಗುಳ

ಜೋಜೋ ಕಂದರ್ಪಕೋಟಿಲಾವಣ್ಯಾ । ಜೋಜೋ ವೃಂದಾರಕವರ ಶಿರೋರನ್ನಾ ॥ ಜೋಜೋ ಮುನಿಮನಮಧುಪಕಮಲವೇ । ಜೋಜೋ ನಂದನ ಸುಕೃತದ ಫಲವೇ ॥ ಜೋಜೋ ॥ ಪಲ್ಲ ॥ ಹೊನ್ನ ತೊಟ್ಟಿಲಮೇಲೆ ಮಣಿಮಯ ಮಾಲೇ । ರನ್ನದ ಪಟ್ಟಿಯ ಮೇಲುಗಟ್ಟುಗಳಾ ॥ ಚನ್ನತೊಟ್ಟಿಲೊಳಿಟ್ಟು ಕೃಷ್ಣಮೂರುತಿಯಾ । ಕನ್ನೆಯರೆಲ್ಲರು ಪಾಡಿ ತೂಗಿದರೂ ॥ ಜೋಜೋ ॥ ೧ ॥ ಶಶಿಮಂಡಲವ ಪೋಲ್ವ ಮೊಗದ ಚನ್ನಿಗನೇ । ಎಸೆವಾ ಕಿರುಗೆಜ್ಜೆಯ ಧ್ವನಿಯ ಬಾಲಕನೇ ॥ ಹೊಸ ಕಂದಾವರೆಯಂದದ ಪಾದಾ । ಬಿಸರುಹನಯನ ತೂಗುವೆ ನಿನ್ನ ಕಂದಾ ॥ ಜೋಜೋ ॥ ೨ ॥ ಪೂತನಿಯಸುವನೀಂಟಿದ ಪೊಸ ಶಿಶುವೇ ।

ವಾತ ದೈತ್ಯನ ಕೊಂದ ಅದ್ಭುತಬಾಲಾ ॥ ಭೂತಗಣಗಳನಂಜಿಸುವ ಅರ್ಭಕನೇ । ಓತೆಮ್ಮ ಬಾಲರ ಸಲಹೋ ಶ್ರೀಹರಿಯೇ ॥ ಜೋಜೋ ॥ ॥ ೩ ॥ ಆವಳಿಸಲು ನಿನ್ನ ಗರ್ಭದ ವಳಗೇ । ಭೂವಳಯುವ ಗೋಪೀಯಳಿಗೆ ತೋರಿಸಿದೇ ॥ ಸೋವನರಿಯು ಬಂದ ದನುಜರ ತರಿದೇ । ಗೋವಳರೊಡಗೂಡಿ ವನದೊಳು ಮೆರದೇ ॥ ಜೋಜೋ ॥ ೪ ॥ ಕ್ಷೀರಾಂಬುಧಿವಾಸಾ ನತಜನಪೋಷಾ । ಮಾರಜನಕ ಶ್ರೀಶಾ ದುರಿತವಿನಾಶಾ ॥ ನಾರಾಯಣ ದಾಸಾ ಹೃದಯನಿವಾಸಾ। ಕಾರುಣ್ಯದೋರಂದೂ ಪಾಡೀ ತೂಗಿದರೂ ॥ ಜೋಜೋ ॥ ೫ ॥ ಶ್ರೀಃ ॥

೨೪ ರಾಗ ಖರಹರಪ್ರಿಯ, ಆದಿತಾಳ | [ ದಾಟಿ —ಅಳುವಾದ್ಯಾತಕೋ

ಅಳುವದ್ಯಾತಕೆ ಬಾಲಾ । ಸುಲಲಿತಗುಣಶೀಲಾ ॥ ಅಳುವದ್ಯಾತಕೋ ಬಾಲಾ ॥ ಪಲ್ಲ ॥ ತಂದೆಯು ಜಠರದೊಳೂ । ನಿಂದೆ ತ್ರೈಮಾಸದೊಳೂ ॥ ಬಂದೆ ಜನನಿಯುದರಕೆ ಸಿತರೇತಸಿ । ನಿಂದ ಶೋಣಿತಪಿಂಡದಿ ನೆಲೆಯಾದೇ ॥ ಅಳುವದ್ಯಾತಕೋ ॥ ೧ ॥ ಜನನೀ ಗರ್ಭದಿ ಮಾಸಾ । ವೆಣಿಸಲೈದಕೆ ನಾನಾ ॥ ದ್ಯನುವಿನ ಅವಯವವನು ತಾಳುತ ಭವ । ನೆನವುತಿದ್ದೆ ಯೇಳನೆ ಮಾಸದೊಳೂ ॥ ೨ ॥ ನರಮಾಂಸಾದಿಯ ಚೀಲಾ । ದಿರುಬಿನೊಳಿರೆ ಬಹಳಾ ॥ ಕರಕರಯೊಳು ಬಿಸಿ ಕಾರೋಷ್ಣದ ಫಲ । ಶಿರದೊಳಗೇರಿದ ಮುರುಕವ ನೆನದೂ ॥ ೩ ॥ ನವ ಮಾಸಗಳೆಯಲು ಸಾ । ಕವನಿಯ ಸಾರುವೆನೆನುತಾ ॥ ಭವರಹಿತನೊಳಭಯುವ ಬೇಡುತ ಹಿತ । ಪವನನ ದಯದಿಂದವನಿಯ ಸೇರಿದೆ ॥ ॥ ೪ ॥ ಮಲಮೂತ್ರಾದಿಗಳಿಂದಾ । ತೊಲಗಲಾಗದೆ ನೊಂದಾ ॥ ಯೆಳೆಬೆರಳನು ಬಾಯೊಳು ಸವಿಯುತ ಬಲು । ಬಳಲುತ ಕ್ಷುಧೆಯೊಳು ಕಳವಳಿಸುವೆಯಾ ॥ ೫ ॥ ಚೀರದಿರೆನ್ನಯ್ಯಾ । ಕ್ಷೀರವೀಯುವೆನಯ್ಯಾ ॥ ನಾರಾಯಣಪದ ವಾರಿಜ ನಂಬಿದ । ಚಾರುಭಕತಭವ ದೂರವ ಗೈನಾ ॥ ಅಳುವದ್ಯಾತಕೋ ಬಾಲಾ ॥ ೬ ॥ ಶ್ರೀಃ ॥

## ಹೆಣ್ಣುಮಕ್ಕಳ ಜೋಗುಳ.

೨೫ ರಾಗ ಯದುಕುಲಕಾಂಬೋಧಿ, ಅಟತಾಳ ] [ ದಾಟಿ — ಜೋಗುಳ

ಜೋಜೋ ಗಿರಿಕುಲಾಧಿಪ ಸುಕುಮಾರೀ । ಜೋಜೋ ಪ್ರಾಣ ರಂಜಿತ ಅಘಹಾರೀ ॥ ಜೋಜೋ ಸದ್ಗುಣಭರಿತೆ ಶ್ರೀಗೌರೀ । ಜೋಜೋ ಪಾವನಚರಿತೆ ಶೃಂಗಾರೀ ॥ ಜೋಜೋ ॥ ೧ ॥ ಅಂಬುಜಭವ ಸುರವಂದಿತೆ ಜೋಜೋ ॥ ಶುಂಭನಿಶುಂಭ ಸಂಹಾರಿಣಿ ಜೋಜೋ ॥ ಶಂಭುವಿನರಸಿ ಸದಾಶಿವೆ ಜೋಜೋ । ಕಂಬುಕಂಧರಿ ಕಮಲಾಂಬಕಿ ಜೋಜೋ ॥ ೨ ॥ ಶ್ರೀಕೃಷ್ಣಭಗಿನಿ ಸರ್ವೋತ್ತಮೆ ಜೋಜೋ । ಲೋಕೇಶ್ವರಿ ನಿತ್ಯಮಂಗಲೆ ಜೋಜೋ ॥ ಶೋಕಭಯೌಘವಿನಾಶಿನಿ ಜೋಜೋ । ನೀ ಕರುಣಿಸಿ ಪೊರೆಯನುದಿನ ಜೋಜೋ ॥ ೩ ॥ ವಾರಿಜಸಂಭವ ರಾಣಿಯೆ ಜೋಜೋ । ಮಾರಮರ್ದನನ ಭವಾನಿಯೆ ಜೋಜೋ ॥ ನಾರಾಯಣನರಗಿಣಿ ಲಕ್ಷ್ಮಿ ಜೋಜೋ । ವಾರಿಜಾಲಯೆ ಗೌರಿ ಶಾರದೆ ಜೋಜೋ ॥ ಜೋಜೋ ॥ ೪ ॥ ಶ್ರೀಃ ॥

## ಚೌಲದಹಾಡು.

೨೬ ರಾಗ ಪಂತುವರಾಳಿ, ಆದಿತಾಳ ] [ ದಾಟಿ — ಹಸ್ತಿನಪುರದೊಳಗಿರುವ

ಗೌರಿಯ ಸುತ ಗಣನಾಥಗೆ ಮಣಿದೂ । ಶೌರಿಯ ಸೊಸೆ ಶಾರದೆಯನು ನೆನದೂ ॥ ಶೌರ್ಯಾಗ್ರಣಿ ದಶರಥ ತಾನೊಲಿದೂ । ಔರಸಸುತ ಶ್ರೀರಾಮಗೆ ಚವಲವಾ ॥ ಗೌರವದಲಿ ಗೈದಾ ಪದಾನಾವೂ । ಶೋಭಾನೆ ॥ ೧ ॥ ಪಟ್ಟದ ರಾಣಿ ಕೌಸಲ್ಯೆಗೆ ಸುತನೂ । ಪುಟ್ಟಿದನೆಂಬುತ್ಸಹವಲಿ ತಾನೂ ॥ ಕೊಟ್ಟನಖಿಳ ದ್ವಿಜರಿಗೆ ದಾನವನೂ । ಇಷ್ಟಾರ್ಥವ ಯಾಚಕರಿಗಿತ್ತವನೂ ॥ ದೃಷ್ಟಿಸಿ ನೋಡಿದನೂ ತನೂಜನನೂ ॥ ೨ ॥ ಸಿತಪಕ್ಷದ ಶಶಿಯಂದದಿ ತನಯಾ । ಅತಿ ಸೌಂದರ್ಯದಿ ಬೆಳದನು ವಿನಯಾ ॥ ಹಿತಕರ ಮೃದುನುಡಿ ನಡೆಯು ಸುಗುಣಿಯಾ । ನತಿತೋಷದೊಳೀಕ್ಷಿಸುತಲಿ ಮುನಿಯಾ ॥ ಕ್ಷಿತಿಪನು ಕರಸುತಲೇ ನುಡಿದನೂ ॥ ೩ ॥ ಗುರುವರ್ಯರೆ ಮಾಮ ತರಳರ

ಗುಣವಾ । ಕ್ರಮಗೊಳಿಸುವ ವಿದ್ಯೆಯ ಸಾಧನವಾ ॥ ಶಮದಮ ಶಾಂತಿಯುದಾರದ ಮನವಾ । ಸಮರದ ಶೌರ್ಯೋನ್ನತಿಕೆಯ ತನವಾ ॥ ಯಮಿವರ ಕಲಿಸೆನುತಾ ನಮಿಸೀದಾ ॥ ೪ ॥ ಶ್ರದ್ಧೆಯೊಳಾ ನೃಪಸುತರುರೆ ಮುನಿಯಾ । ಪೊದ್ದಿನೊಳಿದ್ದು ಪರಿಸಿದರವನಿಯಾ ॥ ಉದ್ಧರಿಸಲು ಮನುಜರ ಸುರತತಿಯಾ । ವೃದ್ಧಿಸಿ ಜ್ಞಾನವನರಿವ ಸಂಗತಿಯಾ ॥ ಬದ್ಧತೆ ಶುಚಿಭಕುತೀ ಯುಕುತೀಯಾ ॥ ೫ ॥ ಪಂಚಾಬ್ದದಿ ಪರಿಸುತ ವೃದ್ಧಿಸುವಾ । ಬಂಜೋದ್ಧಾರಕರಿಗೆ ಮುದ್ದಿಸುವಾ ॥ ಚಂಚಲ ತೊಲಗಿಸೆ ಚವಲದ ಕ್ರಮವಾ । ಮುಂಚಿತವಾಗಿಯೆ ಮಾಡಲು ಗುರುವಾ ॥ ಕಂಚುಕಿಗಳ ಕಳುಹೀ ಬರೀಸೀದಾ ॥ ೬ ॥ ಆ ಸಮಯದೊಳು ವಸಿಷ್ಠರು ಬರಲೂ । ತೋಷದಿ ನೃಪಶಿರವೆರಗಿ ಕುಳ್ಳಿರಲೂ ॥ ಭಾಸಿಪಸುತ ಶ್ರೀರಾಮನೈತರಲೂ । ಭೂಸುರವರ್ಯರು ಸರಸುತಲಿರಲೂ ॥ ಪೂಶಿದರರಶಿನವಾ ಸತೀಯರೂ ॥ ೭ ॥ ಮೊರದೊಳು ಫಲಧಾನ್ಯವ ತಂಡುಲವಾ । ಪರಿಶುಭ್ರದ ವಸ್ತ್ರವ ವೃತ್ತಿಕವಾ ॥ ಸರಸದಿ ಗೋಮಯವನು ಘೃತಪಯವಾ । ಹರಿತವಾಗಿಹ ನಾಪಿತನ ಸುಶಸ್ತ್ರವ ॥ ನಿರಿಸುತ ಬಾಲಕನಾ ಕುಳೀಸಿದರೂ ॥ ೮ ॥ ಕೇಶವ ಕ್ರಮದಲಿ ಖಂಡಿಸಲಾತಾ । ಪೂಸಿದರಾಕ್ಷಣ ಘೃತ ಶಿರಕಿತ್ತಾ ॥ ಮೀಸುತ ಗಂಧಾಕ್ಷತೆಗಳನಿಡುತಾ । ಕೇಶವ ಭೂಭಾರವ ನೀಗೆನುತಾ ॥ ಆಶೀರ್ವದಿಸಿದರೂ ದ್ವಿಜವರರೂ ॥ ೯ ॥ ನಾಪಿತಗುಡುಗರೆಗಳನುರೆ ಕೊಡುತಾ । ಭೂಪನು ಬಂಧು ಮಿತ್ರರನೊಡಗೊಳುತಾ ॥ ಆಪತಿವ್ರತೆ ಸತಿಯರುಗಳು ಸಹಿತಾ । ಶ್ರೀಪತಿ ನಾರಾಯಣಗರ್ಪಿಸುತಾ ॥ ತೋಷದಿ ಭೋಜನವಾ ನಡೆಸಿದರೂ ॥ ಶೋಭಾನೆ ॥ ೧೦ ॥

## ಉಪನಯನ.

೨೭ ರಾಗ ತೋಡಿ, ಆದಿತಾಳ ] [ ದಾಟಿ —ಬನ್ನೀರೆ ನಮ್ಮ ಮನೆಗೆ

ನಯನವಾ ಗೈದಾ ಯಾದವಾ । ವಸುದೇವಾ ಉಪ । ನಯನವಾ ಗೈದಾ ಯಾದವಾ ॥ ಪಲ್ಲ ॥ ನಯನವಾ ಗೈದಾ ಸುತಗೇ । ನಯನವು ತೆರದಂತಾಗೆ । ನಯನಾ ವೇದಾದಿ ಶಾಸ್ತ್ರಾ । ಧ್ಯಯನಾ

ಗಯ್ಯುವ ಬಗೆಗೇ ॥ ನಯನಾವ ॥ ಅನುಪಲ್ಲ ॥ ಚವಲಾದಿ ಕ್ರಮವ ಗೈದೂ । ಕೇಶವ ಮೇಗೇ । ಭವನಂತೆ ಜಡೆ ಬಿಗಿದೂ ॥ ಭುವಿಯೊಳ್ ಮಂಡಲ ಬರೆಸೀ । ಯುವದಾ ರಾಶಿಯ ಗೊಳಿಸಿ । ಯುವನಾನದರಲ್ಲಿ ನಿಲಿಸಿ । ಧವಳಾವಸನವ ತೊಡಿಸೀ ॥ ತವಕದಿ ಕರಶಿರಉರದೊಳಗಿರಿಸುತ । ನವ ಸೂತ್ರವ ಧರಿಸಿದ ವಸುದೇವಾ ॥ ೧ ॥ ವೇದಾಮಂತ್ರಂಗಳಿಂದಾ । ದ್ವಿಜವರರಾಶೀ । ವಾರ್ದಾ ಗಯ್ಯುತ್ತಲಾನಂದಾ ॥ ನಾದಾವಾದ್ಯಂಗಳಿಂದ । ಮೇದಿನಿ ನಡುಗಲಂದಾ । ಯಾದಾವೇಶನನಿಂದ । ಬೋಧೀಸಿ ಮಂತ್ರವೆಂದಾ ॥ ಭೇದಿಸಿ ಮುಸುಕನು ಆದಿತ್ಯನಲನ । ಭೂದ್ವಿಜ ಪಿತಮಾತೆಯರ ನೋಡೆಂದಾ ॥ ೨ ॥ ಸೂತ್ರಾಕಂರದಿ ಶೋಭಿಸೇ । ಉಪವೀತಾಜಿನ । ಸೂತ್ರಾ ಮೇಲೆ ವಿರಾಜಿಸೇ ॥ ಗೋತ್ರಾಭಿವಾದನೆಯ । ಮಂತ್ರಾವರಿಯೆ ಕಟಿಯ । ಸೂತ್ರಾ ದಂಡವುಸುಪ । ಪಿತ್ರಾವಾಗಿಯೆ ಮೆರೆಯ ॥ ಶ್ರೋತ್ರದಿ ವರಗಾಯತ್ರಿಯ ಮಂತ್ರವ । ಗುಪ್ತದೊಳುಪದೇಶಿಸೆ ವಸುದೇವಾ ॥ ೩ ॥ ನಾಗೇಂದ್ರಶಯನ ನೀನೂ । ಬ್ರಹ್ಮಚರ್ಯವ । ನೀಗ ಸ್ವೀಕರಿಸುತಿನ್ನೂ ॥ ಪೋಗಿ ಸಾಧುಗಳ ಹೆ । ಬ್ಬಾಗಿಲ ಮುಂದೆ ಭಿಕ್ಷೆ । ಬೇಗ ಪಡೆದು ಗುರು । ಆಗಾರದೊಳು ಸೇರೂ ॥ ಆಗ ಭೋಗಗಳ ನೀಗಿ ಶ್ರುತಿಗಳ ಸ । ರಾಗದಿ ಪಠಿಸುತ ಯೋಗಿಯಾಗೆನುತಾ ॥ ೪ ॥ ಗುರುಹಿರಿಯರಾ ಸೇವಿಸೂ । ಹಿಂಸೆಯಾ ತ್ಯಜಿಸೂ । ತುರುಕರುಗಳಾ ಪೋಷಿಸೂ ॥ ಪರದೋಷವೆಣಿಸದೆ । ಶಿರಿಭೋಗ ಬಯಸದೆ । ಪರರುಪಕಾರದೊ । ಳಿರಿಸೂ ದಯೆಯ ಸಲಿಸೂ ॥ ಪರಿಕಿಸದಿರು ಪರ ಸಿರಿ ಸತಿಯರನೆನು ತೊರೆದನು ಗುರುಶಿರಿನಾರಾಯಣಗೇ ॥ ನಯನಾವ ॥ ೫ ॥

## ಭಿಕ್ಷೆಹಾಕುವುದು.

೨೮ ರಾಗ ಕೇದಾರಗೌಳ, ಅಟತಾಳ ] [ ದಾಟಿ—ಬಾರೈ ಬಾಲನೆ ಸುಮು

ಕಾಮಿನಿ ನೋಡೇ ವಟು । ವಾಮನನಾಗಮನಾ ॥ ಕಾಮಿನೀ ನೋಡೇ ವಟು ॥ ಪಲ್ಲ ॥ ಕಾಮಿನಿ ಭಿಕ್ಷೆಯ । ಸ್ವಾಮಿಯು ಬರುತಿಹಾ ॥ ಕಾಮಿನೀ ॥ ಅನುಪಲ್ಲ ॥ ಅದಿತಿಯು ಕಾಮಿ । ದಧಿವ್ರತ

ವಿರಚಿಸಿ ॥ ಪದುಮದಳಾಕ್ಷನ । ಮುದವಲಿ ಪಡದಳು ॥ ಕಾಮಿನಿ ॥
॥ ೧ ॥ ಜನನಿಗೆ ನಮಿಸಲು । ವಿನಯದಿ ಹರಸುತ ॥ ದನುಜರ ಜೈಸಲು ।
ಘನವರವಿತ್ತಳು ॥ ೨ ॥ ಕರದಿ ಕಮಂಡಲ । ಧರಿಸಿ ಭೂಮಂಡಲ ॥
ಚರಿಸುತ ಬಲಿಗೃಹ । ಕಿರದೆ ಬರುವನಹಾ ॥ ೩ ॥ ಕೊರಳೊಳು ಜಪ
ಸರ । ಬೆರಳೊಳಗುಂಗುರ ॥ ಉರದಿ ಪೀತಾಂಬರ । ಧರೆಗೆ ಪ್ರಭಾ
ಕರ ॥ ೪ ॥ ಭಿಕ್ಷೆಯಪೇಕ್ಷಿಸು । ತಾಕ್ಷಣ ಬಲಿಯೊಳು ॥ ಕುಕ್ಷಿಯೊಳೀ
ರಡಿ । ವಕ್ಷದೊಳೊಂದಡಿ ॥ ೫ ॥ ದಿನದಿನ ಭಕತನ । ಮನೆಯನು
ಕಾಯುವ ॥ ದಿನಪ ನಾರಾಯಣ । ಕನಕವನೀಯುವ ॥ ಕಾಮಿನೀ
ನೋಡೇ ಪಟು ॥ ೬ ॥ ಶ್ರೀಃ ॥

## ಸಮಾವರ್ತನೆ.

೨೯ ರಾಗ ಜಂಜೂಟಿ, ರೂಪಕತಾಳ

ಕೀರ್ತಿವಂತ ರಾಮ ಸಮಾ । ವರ್ತನೇಯ ಗೈಸಿದ ॥ ಆರ್ತ
ರಾದ ಜನರಿಗೆ ಇ । ಷ್ಟಾರ್ಥವನ್ನೆ ಸಲಿಸಿದ ॥ ಕೀರ್ತಿವಂತ ರಾಮ ॥
॥ ಪಲ್ಲ ॥ ಜನನಿ ಜನಕರಿಂಗೆ ನಮಿಸಿ । ವಿನಮಿಸಿದ ಗುರುವಿಗೆ ॥ ಘನ
ಸುಬ್ರಹ್ಮಚರ್ಯ ವ್ರತವ । ನನುಸಮಾಪ್ತ ಗಯ್ಯುವ ॥ ಕೀರ್ತಿ ॥ ೧ ॥
ವ್ಯಾಸ ಪರುಶುರಾಮ ಭೀಷ್ಮ । ಕೇಶಹನುಮರೀ ವ್ರತಾ ॥ ಕ್ಲೇಶರಹಿತ
ವೆಂದು ನಿರತ । ಪೋಷಿಸಿದುದ ತ್ಯಜಿಸಿದ ॥ ೨ ॥ ದಕ್ಷಿಣೆಯನಿತ್ತು
ಗುರುಪ್ರ । ದಕ್ಷಿಣೆಯ ಗಯ್ಯುತಾ ॥ ದೀಕ್ಷೆಯನ್ನೆ ತ್ಯಜಿಸಿ ಕುಜನಾ ।
ಶಿಕ್ಷೆಗೈವೆನೆನ್ನುತಾ ॥ ೩ ॥ ಶಾಸ್ತ್ರವೇದ ಸ್ಮೃತಿಪುರಾಣ । ಸೂತ್ರಗಳನು
ಪಠಿಸಿದ ॥ ಗಾತ್ರವನು ಪವಿತ್ರಗೊಳಿಸಿ । ಧೋತ್ರವನ್ನೇ ಧರಿಸಿದ ॥
॥ ೪ ॥ ಕೇಶವನ್ನೆ ಬಾಸಣಿಸೆ ಸು । ವಾಸಿನಿಯರು ಕುಸುಮವಾ ॥ ಭಾಸ
ಫಣೆಗೆ ತಿಲಕವಿಟ್ಟು । ಪೂಸಿದರು ಸುಗಂಧವಾ ॥ ೫ ॥ ನಯನಕಾಗ
ಕಾಡಿಗೆಯನು । ನಯದೊಳಿಟ್ಟು ಸತಿಯರು ॥ ದಯವ ಸುಜನರೊಡನೆ
ತೋರು । ಜಯುವ ಸುರರಿಗೆಂದರು ॥ ೬ ॥ ಝುರಿಯ ಶಾಲೆ ನಡುವಿ
ಗುಟ್ಟು । ಮಿರುಗುವಂಗಚ ತೊಟ್ಟನು ॥ ಧರಿಸಿ ಕುಂಡಲಗಳ ಕಿವಿಯೊ
ಳಿರಿಸಿ ಸರಗಳಿಟ್ಟನೂ ॥ ೭ ॥ ಹೋಮನಿಯಮ ಕ್ರಮದಿ ಗೈದು । ಭೂಮಿ

ಸುರರು ವರಸುತ ॥ ಕಾಮರೂಪ ಖಳರ ಕುಲನಿರ್‌ । ನಾಮ ಗೈವುದೆ ನ್ನುತ ॥ ೮ ॥ ಉತ್ತಮಾಂಗ ಸ್ವೀಕರಿಸೆ ಗೃ । ಹಸ್ಥಾಶ್ರಮನಾಗಲೆ ॥ ಮುತ್ತಿನಕ್ಷತೆಯಾರತಿಯು । ನೆತ್ತಿದರು ಸತಿಯರೂ ॥ ೯ ॥ ರಾಯ ಶ್ರೀನಾರಾಯಣಾಂಶ । ನ್ಯಾಯದಿಂದ ಪ್ರಜೆಗಳಾ ॥ ಪ್ರಿಯವಾಗಿ ಪೊರೆ ಯ ಸುರರು । ಪೂಮಳೆಯ ಸುರಿದರು ॥ ೧೦ ॥ ಶ್ರೀಃ ॥

## ಮದುಮಗನಿಗೆ ಹಾಲುಕೊಡುವದು.

೩೦ ರಾಗ ತೋಡಿ, ಆದಿತಾಳ ] [ ದಾಟಿ —ನೀರಜಾಕ್ಷೀ ಸಾರಿಬಂದೆವೂ

ಬಾರ ತಾರೆ ನೀರೆ ಕ್ಷೀರವಾ । ಬೇಗನೆ । ಬಾರ ತಾರೆ ನೀರೆ ಕ್ಷೀರವಾ ॥ ಬೇಗ ತೋರೆ ದಯದೋರುವಾ । ಬೇಗನೆ । ಬಾರೆ ತಾರೆ ನೀರೆ ಕ್ಷೀರವಾ ॥ ಪಲ್ಲ ॥ ನೀರೆ, ವಯ್ಯಾರ, ಶೃಂಗಾರಾದಳಿಯನಿಗೆ ॥ ತಾರ ನೀರೆ ಕ್ಷೀರವಾ ॥ ಅನುಪಲ್ಲ ॥ ಬಾಲೆಯನೊಯ್ಯಾಲು ಕೇಳಿ ಬಂದ । ಖೂಳ ಶಿಶುಪಾಲಾನೊಳ್‌ ಹೋರಿ ನಿಂದಾ ॥ ಬಾಲಾ, ಸುಶೀಲ, ಗೋಪಾಲಾಕೃಷ್ಣ ಬೇಗ ॥ ತಾರೇ ॥ ೧ ॥ ಕ್ರೂರನ ಸೇರಿದ ರುಗ್ಮನನು । ತೇರಿನ ಸ್ತಂಭಕೆ ಬಿಗಿದು ತಾನೂ ॥ ನಾರಿಯು, ಮರಿ ಸಾಲು, ಸಾರಿದ ಧೀರನಿಗೆ ॥ ೨ ॥ ಸಿಟ್ಟಿನೊಳಿಂದ್ರನು ವೃಷ್ಟಿ ಯನು । ಸೃಷ್ಟಿಸಲಿಷ್ಟರ ಕಷ್ಟನನೂ ॥ ದೃಷ್ಟಿಸಿ, ಬೆಟ್ಟಿನೊಳ್‌, ಬಟ್ಟವೆತ್ತಿದ ತಾನು ॥ ೩ ॥ ಸಾಸಮುಖಿ ಸತ್ಯಭಾಮಾಮನಾ । ಕೋರಿಕೆ ಸಲಿಸಲು ಸುರರ ವನ ॥ ವಾರಿ, ಜಾತಸುಮ, ಸಾರಿ ದಂತವ ನಮ್ಮ ॥ ೪ ॥ ಶರಣರ ಕರುಣದಿ ಪೊರೆವ ಘನ । ಬಿರು ದಂಕ ಶ್ರೀಕಾಂತ ನಾರಾಯಣ ॥ ನರನಾ, ಶಂಕರನಾ, ಮೈದುನನಾ ದಾಹಕೆ ಬೇಗ ॥ ತಾರೇ ॥ ೫ ॥ ಶ್ರೀಃ ॥

## ವರಪೂಜೆಮಧುಪರ್ಕ.

೩೧ ರಾಗ ಜಂಜೂಟಿ, ಅಟತಾಳ ] [ ದಾಟಿ —ಕಾಂತೆ ಕೇಳೆ ಪ್ರಮಾದವ

ವರ ಪೂಜೆ ಮಾಡಿದನೆ ಶ್ರೀರಾಮಗೆ । ಷಂ ಪೂಜೆ ಮಾಡಿದ ನೃಪಸೋಮಗೆ ॥ ಪಲ್ಲ ॥ ತಿಲಿಯಾದಹಲ್ಲೈಯ । ನೊಳಿದು ಪೊರೆದ

ದಿವ್ಯ ॥ ನಳಿನಪಾದಕೆ ಅರ್ಘ್ಯಪಾದ್ಯವ ಗೈದು ॥ ೧ ॥ ಗೋಚರಿಸದೆ ನಿಂದ । ನೀಚವಾಲಿಯ ಕೊಂದ ॥ ಆಚಮನಿಯ ಕರಾಬ್ಜಕೇ । ಪುನ । ರಾಚಮನಿಯ ಕರಾಬ್ಜಕೇ । ಇತ್ತು ಪೂಜೇ ॥ ೨ ॥ ಮದ ನಾರೀ ಧನುವನೆ । ಮುದದಿಂದೆತ್ತಿದೆ ನೀನೆ ॥ ಮಧುಪರ್ಕವನೆ ಗೈದೆ ನೆನ್ನುತ । ವರಪೂಜೆ ॥ ೩ ॥ ಮಿರುಪ ಸುವಸನವ । ಸುರುಚಿರಾಭರಣವ ॥ ಪರಿಮಳಿಸುವ ಗಂಧ ಪುಷ್ಪವ । ನಿತ್ತು ಪೂಜೆ ॥ ೪ ॥ ರಕ್ಷಿಸ ಸುಜನರ । ಶಿಕ್ಷಿಪ ಕುಜನರ ॥ ದಕ್ಷಿಣೆ ಯಿತ್ತನು ಭೂವರಾ ॥ ೫ ॥ ನಾರಿಯೊಡನೆ ಪಾದಾ । ಸಾರಸಕೆರಾಗಿದಾ ॥ ನಾರಾಯಣಾಂತ ನೀನೆನ್ನುತ । ವರಪೂಜೆ ॥ ೬ ॥ ಶ್ರೀಃ ॥

## ಮಾಲೆಹಾಕುವುದು.

೩೭ ರಾಗ ಕಲ್ಯಾಣಿ, ರೂಪಕತಾಳ ] [ ದಾಟಿ —ದೇವೀ ಮೀನಾಕ್ಷಿ ಮುದಂ

ಶ್ರೀರಾಮಂ ಜಾನಕಿಯಂ । ವರಿಸಿದಂ ಮುದಂ । ಜಗಕಂ ॥ ಶ್ರೀರಾಮಂ ॥ ಪಲ್ಲ ॥ ವಾರಿಜಮುಖಿ ವರನ ಗ್ರೀವಕೆ । ಚಾರುಕುಸುಮಹಾರವೀಯಲು ॥ ಶ್ರೀರಾಮಂ ॥ ಅನುಪಲ್ಲ ॥ ವ್ಯೋಮಕೇಶನೀಶ ಧನುವ । ವಾಮನಯನದೀಕ್ಷಿಸುವ ॥ ಸಾಮದಿಂದ ಸತಿಯ ಮೊಗವ । ಪ್ರೇಮದಿಂದಲೆ ನಿರುಕಿಸುತಲೆ ॥ ಶ್ರೀರಾಮಂ ॥ ೧ ॥ ನೃಪರ ಕುವರರ ಸಮುದರ್ಪ । ವಪಹರಿಸಿದ ಶಿವನ ಚಾಪ ॥ ಚಪಲತನದಿ ತೆಬ್ಬನೆಳದು। ಅಪರಿಮಿತ ಪ್ರತಾಪದೋರುತ ॥ ಶ್ರೀರಾಮಂ ॥ ೨ ॥ ಮನುಮಥಪಿತ ನಿವನೆನ್ನುತ । ವನಿತೆಯರು ಸುಮೋದಗೊಳುತ ॥ ಜನಕಜೆಯ ಸುಪುಣ್ಯವೆನ್ನುತ । ಘನತೆಜೊತೆ ಸಮಾನವೆನ್ನಲು ॥ ಶ್ರೀರಾಮಂ ॥ ॥ ೩ ॥ ಪಾವನ ಘನಶ್ಯಾಮ ರಾಮ । ದೇವನುತ ಪವಿತ್ರನಾಮ ॥ ಪಾವಮಾನಿಯ ಪ್ರಿಯ ವಿಜಯ । ಜೀವ ಕಾವ ಭಕತಜನವ ॥ ೪ ॥ ವರಮುನಿಗಳು ತೋಷಗೊಳ್ಳೆ । ಸುರರು ಗರೆಯೆ ಸುಮನೊಮಳೆ ॥ ನರನೆನಿಸಿದ ನಾರಾಯಣ । ಧರಣಿಜಾತೆ ಸೀತೆಯನ್ನ ॥ ಶ್ರೀರಾಮಂ ॥ ೫ ॥

## ಧಾರೆ.

೩೩ ರಾಗ ಜಂಜೂಟಿ, ಅಟತಾಳ

ಧಾರೇಯೆರದ ರಾಯಾ । ನಾರೀ ಜಾನಕಿಯಾ । ಧಾರೇಯೆರದ ರಾಯಾ ॥ ಪಲ್ಲ ॥ ಶ್ರೀರಾಮಚಂದ್ರಗೆ ಧಾರುಣಿಸುತೆಯಾ ॥ ಧಾರೇಯೆರದ ರಾಯಾ ॥ ಅನುಪಲ್ಲ ॥ ಗುರುವಸಿಷ್ಠರು ರಘು । ವರವಂಶಾವಳಿಯಾ ॥ ವರೆಯೆ ಶತಾನಂದ । ಧೊರೆಯು ಪೀಳಿಗೆಯಾ ॥ ಧಾರೇ ॥ ೧ ॥ ಮಂಗಲಾಷ್ಟಕವಾ ಭೂ । ಸುರರೆಲ್ಲ ಪಾಡೇ ॥ ಅಂಗನೆಯರು ಶುಭ । ಸಂಗೀತ ಹಾಡೇ ॥ ೨ ॥ ವರವಧುಗಳ ವೃದು । ಕರವ ಜೋಡಿಸುತಾ ॥ ಸರಸದಿ ವಾರಿಯಾ । ಸುರಿದು ತೋಷಿಸುತಾ ॥ ೩ ॥ ಹೋಮವ ಗಯ್ಯ ಸು । ತ್ರಾಮರು ಮೇಗೇ ॥ ಪೂಮಳೆಗರೇದರು । ರಾಮಾಜಾನಕಿರಿಗೇ ॥ ೪ ॥ ವಿಧಿಪೂರ್ವಕದಿ ಸಪ್ತ । ಪದಿಯಾ ಮಾಡಿಸುತಾ ॥ ವಧುವರರಿಗೆ ಮಂತ್ರಾ । ಕ್ಷತೆಯ ನೀಡಿಸುತಾ ॥ ೫ ॥ ವೇದಾಮಂತ್ರದೊಳಾಶೀರ್ । ವಾದವ ದ್ವಿಜರೂ ॥ ಮೋದದಿ ಗಯ್ಯಲು । ನಾದಾವಾದ್ಯಗಳೂ ॥ ೬ ॥ ಶ್ರೀಪನಾರಾಯಣ । ರೂಪ ಶ್ರೀರಾಮಾ ॥ ನೀಪತಿವ್ರತೆ ಸೀತೇ । ಶ್ರೀಲಕ್ಷ್ಮೀಭಾಮಾ ॥ ೭ ॥ ಶ್ರೀಃ ॥

## ಆಭರಣ ಇಡುವದು.

೩೪ ರಾಗ ಮಧುಮಾಧವಿ, ತ್ರಿಪುಟತಾಳ ] [ ದಾಟಿ —ಕರದೂಪಚರೀಸೀ

ಶೃಂಗಾರಗೊಳೀಸೀದರೂ । ಅಂಗನೇಯರೂ । ಶೃಂಗಾರಗೊಳೀಸೀದರೂ ॥ ಪಲ್ಲ ॥ ಶೃಂಗರವ ಗೊಳಿಸಿದರು ಸತಿಯರು । ಅಂಗನಾಮಣಿ ಜಾನಕಿಯನುರು । ಕಂಗಳಿಗೆ ಕಡುಸೊಬಗೆನಿಸಿ ಕರು । ಣಾಂಗ ರಾಮನ ರಾಣಿಯಂಗವ ॥ ಶೃಂಗಾರ ॥ ಅನುಪಲ್ಲ ॥ ಬಾಲೇ ಕೋಮಲೇ ಸೀತೆಗೇ । ಮೇಘಾವಳಿಯಾ । ಶಾಲೇಯನುಟ್ಟೊ ಮಿಗೇ ॥ ವಾಲೆಯಾ । ಮೇಲೆಸೆವ ಮೌಕ್ತಿಕ ಜಾಲಿಯಾ । ಸಾಲಾಗಿ ಸರಪಣಿ ಮಾಲೆಯಾ । ಮಣಿ ಖಚಿತ ಬಾವಲಿಜಾಲೆಯ ॥ ಮೇಲೆ ಜರಿ ಕಂಚುಕ ತೊಡಿಸಿ ಮಣಿ । ಮಾಲೆ ಮೋಹನ ಮಾಳೆ ಟೀಕಿಯ ।

ಲೋಲ ಪುತ್ಥಳಿ ವೈಜಯಂತಿಯ । ಮಾಲಿಕೆಗಳನು ಲೀಲೆಯಿಂದಲಿ॥ ಶೃಂಗಾರ ॥ ೧ ॥ ಕಡಗ ಕಂಕಣ ಚೂಡ್ಯವ । ದೋರೆಯ ಚಲುವ । ನಡುವೆ ಹವಳಚೂಡವ ॥ ಬೆಡಗಿನ । ಹಸ್ತಾಭರಣ ಬಡನಡುವಿನ । ಮೇಲೆಸವ ಚಿನ್ನದ ವಡಿಯಣ । ದಾಬುಗಳ ಗೆಜ್ಜೆಯ ಶೆಡಗಿನ ॥ ಒಡನೆ ಪದಗಳಿಗಪ್ಪ ಪೈಜಣಿ । ಯೆಡೆಯ ನೂಪುರ ಪಾಡಗವು ಚೆಂ। ದೊಡವೆ ಪಿಲ್ಲಿಗಳಂಗುಳೀಯಕ । ದೊಡವೆಗ ಳನಡವಡಿಸಿ ಸತಿಯರು ॥ ಶೃಂಗಾರ ॥ ೨ ॥ ಕಣ್‍ಗಳ್ಗೆ ಕಪ್ಪನಿಟ್ಟು । ಕುಂಕುಮ ತಿಲಕ । ಫಣೆಗೆ ಮುಂದಲೆಯ ಬೊಟ್ಟು ॥ ಮಿನು ಗಲು । ಮೂಗುತಿಯು ನಾಸ್ಯದ ಯೆ[illegible]ಯೊಳು । [illegible]ಣಿಖಚಿತ ಬೊಟ್ಟುಗಳುಲಿಯಲು ॥ ಫಣಿವೇಣಿಯಧರವು ಪೊಳೆಯುಲು । ಕನಕ ಮಯ ಕಟ್ಟಾಣಿ ಯೆಡೆಮಣಿ । ವನಿತೆಯು ಶೃಂಗಾರಮಣಿ ದಿನ । ಮಣಿಯ ನಿಂದಿಪ ಬಂದಿ ಮಾಕ್ತಿ[illegible] । ಮಣಿಯ ಹಾರಗಳನುವಿ ನಿಂದಲಿ ॥ ೩ ॥ ಫುಲ್ಲಲೋಚನೆ [illegible]ಯ । ವೇಣಿಗೆ ಜಡೆಯಾ । ಬಿಲ್ಲಯ ಬಿಗಿದು ನಯ ॥ [illegible]ಯ । ಮಲ್ಲಿಗೆಯ ಸುಮಗಳ ಝಲ್ಲಿಯ । ಮಧ್ಯದೊಳು [illegible] ಬಿಲ್ಲೆಯ । ಜಡೆಗೊಂಡೆ ಕೊಸ ಯೊಳು ಚೊಲ್ಲೆಯ ॥ ಘುಲ್ಲೆಸಲು ಉಂಗುರವು ಬೆರಳೊಳು । ಮೆಲ್ಲ ನಡೆಯಲು ಬಳುಕುವಳು ಶ್ರೀ । ನಲ್ಲೆ ನಾರಾಯಣನರಸಿ ಸಟೆ । ಯಲ್ಲ ನಲು ಜನರೆಲ್ಲ ಹರುಷ[illegible] ॥ ಶೃಂಗಾರ ॥ ೪ ॥ ಶ್ರೀಃ ॥

## ಅರಸಿನೆಣ್ಣೆ.

೩೫ ರ[illegible] [illegible]ನೋಹರಿ, ಆದಿತಾಳ ] [ ದಾಟಿ —ಶ್ರೀರಾಮ ಜಯ

[illegible] ನಯನ । ಶ್ರೀರಾಮಚಂದಿರನ । ನಾರೀ ಸೀತಾ ರತುನ[illegible] ಅರಸಿ[illegible] ಹಚ್ಚುವಳು ॥ ೧ ॥ ವೇದವನೊಯ್ವನ ಕೊಂದ । ಭೂಧರ[illegible]ದ [illegible]ಂದ ॥ ಆದಿವರಾಹ ಮುಕುಂದ । ಪಾದಕೆರಗಿದಳು॥ ॥ ೨ ॥ ನರಹರಿರೂಪದಿ ಮೆರದ । ಧರಣಿಯ ದಾನವ ಪಿಡಿದ ॥ ಸರಸಿಜ ಹಾಸಕೆ ಸುಖದ । ಅರಸಿನ ಹಚ್ಚುವಳು ॥ ೩ ॥ ಧರಣಿಪರ ಶಿರವ ರಿದ । ಮರುಳ ಸುಬಾಹುನ ತರಿದ ॥ ಕರಯುಗಕೇ ಪರಿಮಳದ ।

ಅರಶಿನ ಹಚ್ಚುವಳು ॥ ೪ ॥ ಪಾತಕಿ ಪೂತನಿಯುಸುವ । ಘಾತಿಸಿ ಸ್ತ್ರೀಯರ ವ್ರತವ ॥ ಕಾತುರದಿಂ ಕೆಡಿಸಿದ ಪಾದಕೆ । ಅರಶಿನ ಹಚ್ಚುವಳು ॥ ॥ ೫ ॥ ಕಲಿಯುಗದಂತ್ಯಕೆ ಹಯುವ । ಛಲದೊಳಗೇರುತ ಮಲೆವ ॥ ಖಳರನು ಸಂಹರಿಸುವ ಪಾದಕೆ । ಅರಸಿನ ಹಚ್ಚುವಳು ॥ ೬ ॥ ತಪನಕುಲಾಂಬುಧಿಚಂದ್ರ । ಸುಪವಿತ್ರ ಗುಣಸಾಂದ್ರ ॥ ವಪುವಿಗೆ ಪೂಸುವೆ ಗಂಧ । ವಿಪುಳ ಶುಭಾನಂದಾ ॥ ೭ ॥ ಮುಡದಿಯರಾ ಜಾನಕಿಯು । ತೊಡೆಯೊಳಗೇರಿಸಿ ಪತಿಯು ॥ ಬೆಡಗಿನೊಳೀಯುತ ಪೀತ । ನುಡಿದರು ಪೂಸೆನುತ ॥ ೮ ॥ ಭೂತಳಜಾತೆಯ ಮೊಗಕೆ । ನೂತನ ಕಾಂತಿಯು ಕರಕೆ ॥ [illegible]ತಿಯೊಳಾ ಶ್ರೀರಾಮು । ತಿಮುರಿದ ಸುಪ್ರೇಮು ॥ ೯ ॥ ಕ್ಷಿತಿಸುತೆ [illegible]ೀಗೆ ಸಮಾನ । ಪತಿಯೆ ನಾರಾಯಣ ॥ ಸತಿಯರಾರತಿಯೆತ್ತಿ । ನುತಿಸಿದರಂದ [illegible]ರ ॥ ೧೦ ॥ ಶ್ರೀಃ ॥

೩೬ ರಾಗ ಜಂಜೂಟಿ, ಅಟತಾಳ [ದಾಟಿ —ಕೇಳ್ ಸಾರಸಲೋಚನೇ

ತಾಮರಸಲೋಚನ । [illegible]ೀನ । ವಂದಿಪ ನಿನ್ನ [illegible] ತಾಮರಸಲೋಚನ ॥ ಪಲ್ಲ ॥ ಸಾ[illegible] ಸರಸವಚನ । ನೀರಜವದನ । ಸೋಮಾನನ ॥ ತಾಮರ[illegible]ೀಚನ ॥ ಅನುಪಲ್ಲ ॥ ಚಂದಿರತೇಜವ । ನಿಂದಿಪ ವದನವ । ಸುಂದರ ಮುಖ[illegible] । ನಂದದಿ ಪೂಸುವ । ಚಂದನಲೇಪವ । ಚಂದದಿ ಧವ ॥ ತಾ[illegible]ಲೋಚನ ॥ ೧ ॥ ಉರುತರ ಕರ್ಮವ । ಪರಹಿತಕಾರ್ಯವ । ಹರಿ[illegible]ರ ಸತ್ಸೇವ । ಹರಿಪೂಜನವ । ವಿರಚಿಪ ಕರವ । ತೋರಿಸು ಧವ ॥ ತಾ[illegible]ರಿಯುಶುಂಡಾಲವ । ಸರಿಯುಪೋಲುವ ತವ । ಕರಕೆ ಜ[illegible]ರಸದಿ ಪೂಸುವ । ಪರಿತೋಷಿಸುವ । ಪ್ರೀತಿಯು ಭಾವ [illegible] ॥ [illegible]ಗಳಿಂಗತಿ । ಮೋದದೊಳುಪಕೃತಿ । ನಾಧಿಸುತಿರುವ । [illegible]ಷುವ । ವೇದಾಗಮುವ । ನಾದರಿಸುವ ॥ ೪ ॥ ಸದಮಲ ಗ[illegible] [illegible]ಯುಗ ಕರಗಿದೆ । ಕ್ರುಧವನು ತೋರದೆ । ಮುದವನು ಬೀರಿದೆ । ಪ್ರೀತಿಸಬಾರದೆ । ಬೇಡುವೆನಿದೆ ॥ ೫ ॥ ಕೋಮಲ ಮನಯುತೆ । ಸಾಮುಗುಣಾನ್ವಿತೆ । ಹೇಮದ ಲೇಪವೆ । ಪ್ರೇಮದಿ ಪೂಸುವೆ । ಕಾಮಿತವೀಯುವೆ ।

ಭಾಮಾಮಣಿ ॥ ೬ ॥ ಅರಸಿಯೆ ನಿನ್ನಯ । ಕರವನು ತೋರೇ ನಯ । ವರಸಿನಗಂಧವ । ಸರಸದಿ ತೀಡುವ ॥ ನಾರಾಯಣ ಕಾವ । ಸೌಖ್ಯ ವನೀವ ॥ ತಾಮರಸಲೋಚನೆ ॥ ೭ ॥ ಶ್ರೀಃ ॥

## ಓಕುಳಿಹಾಡು.

೩೭ ರಾಗ ಮುಖಾರಿ, ಅಟತಾಳ ] [ ದಾಟಿ — ರಂಗನ ಪರಿಣಯದ್ವೈದನೆ

ರಂಗಾನುದ್ವಾಹದ ನಾಲ್ಕನೆ ದಿವಸದಿ । ಅಂಗನೆಯರುಗಳೈದಿ । ಶೋಭಿಪ ಶುಭ, ರಂಗ ಮಂಟಪ ಮಧ್ಯದಿ । ಕುಳ್ಳಿರಿಸಿ ಶ್ರೀ, ರಂಗನ ವಾಮಾಂಗದಿ । ರುಗ್ಮಿಣಿಯ ಮುದದಿ ॥ ಅಂಗಜನ ಮದದಾನೆಯಂ ದದಿ । ತುಂಗವಸನಾಂಗಿಯರು ಸರಸದಿ । ಮಂಗಳಕೆ ಮೇಲೆನಿಸುವರ ಶಿನ । ವಂಗಕುರೆ ತೀಡಿಸುತ ವಧುವರ ॥ ರಿಂಗಾರತಿಯೆತ್ತಿ । ಪರಾಸಿ ದರೂ ॥ ೧ ॥ ಸರಸದಿ ಹಸೆಯಿಂದ ಪೊರಡಲು ಸತಿವೃಂದ । ಭರಿತ ಸಂತೋಷದಿಂದ । ಪೊಂಗಲಶಂಗ, ಳಿರಿಸಿ ಕುಂಕುಮಸೌಗಂಧ । ಕಸ್ತುರಿಮುಖ್ಯ, ಪರಿಮಳ ಜಲವನಂದ । ತೋರಣಾದ ಮುಂದ ॥ ಗಿರಿಸಿ ಪರಿಜನಪೆರಸಿ ಹರಿವಣ । ವರಸಿಕರದೊಳು ಧರಿಸಿ ಸಂಭ್ರಮ । ವರಶಿಯರು ಘನ ಹರುಷದೊಳು ಸುರ । ವರರ ಸತಿಯರ ತೆರದಿ ನಿಂದಿರೆ॥ ಭರದಿ ವಾದ್ಯಗಳೂ ಮೊರೆಯಲು ॥ ೨ ॥ ಕುಸುಮದಳಾಕ್ಷನ ವಸನದ ಕೊನೆಯನ್ನ । ಶಶಿಮುಖಿ ಪಿಡಿದು ಮುನ್ನ । ಗಮಿಸುವ ಮನ, ಕುಶಲಕೆ ಸುರರಾಕ್ಷಣ । ಸೂಸಿದರು ಸಂ, ತಸದೀ ಪೂಮಳೆಯ ಘನ । ದಂಪತಿ ಗಳನ್ನ ॥ ಕುಸುಮನಯನೆಯರಾಗ ಕರತಂ । ದೆಸವ ಮೌಕ್ತಿಕ ತೋರ ಣದ ಮುಂ । ದೆಸೆಯೊಳವದಿರ ನಿಲಿಸಿ ಕರದೊಳು । ಪೊಸ ಸುವರ್ಣದ ಬಟ್ಟಲುಗಳೊಳು ॥ ಮಿಸುಪ ಕೆಂಜಲವಾನಿರಿಸಿದರು ॥ ೩ ॥ ನಾಗ ಶಯನನಾಗ ನಾಗವೇಣಿಯು ವೊಗ । ಬಾಗಿರೆ ಶಿರಕೆ ಬೇಗ । ಸೇದಿದ ಜಲ, ವೇಗದೊಳುರದೊಳಾಗ । ಸಂಭ್ರಮದಿಂದ, ಲೋಗರು ನೋಡುವಾಗ । ಸಂತಸದ ಯೋಗ ॥ ವಾಗಿ ಪರಿಣಮಿಸಲ್ಕೆ ಗಗನದ । ಮೇಗೆ ಸುರಂಗನೆಯರತಿನಗೆ । ರೋಗವಲಿ ಬಸವಳಿದರುಳಿದ ವಿ । ರಾಗಿಗಳಿಗನುರಾಗವಾಗಲು ॥ ಭೋಗಾದಾಶೆಯೊಳು ತೆರಳಿದರು ॥ ೪ ॥

ಕಲಹಂಸಗಮನೆ ತಾ । ನಲವಿಂದ ರೋಹಿತ । ಜಲವ ಕಯ್ಯೊಳು ಗೊಳುತಾ । ಕಾಂತನ ಪಾದ, ತಲಕೆ ಬೇಗನೆ ಸೇದುತ । ಓಕುಳಿ ಯಾಟ, ದೊಲವನ್ನು ತೋರಿಸುತ । ಶಿರಬಾಗಿಸುತ ॥ ಇರುತಿರಲು ಚಳಯದೊಳು ಪರಿಮಳ । ವಿಳಿಯ ತುಂಬಲು ನಳಿನಮುಖಿಯರು । ಸೆಳಸೆಳದು ತಮ್ಮೊಳಗೆ ಸೇದುತ । ಚಲುವ ನಾರಾಯಣನ ಸ್ಮರಿಸುತ॥ ಜಲಧಿಯ ಸಾರಿದರೂ । ಸತಿಯಾರು ॥ ೫ ॥ ಶ್ರೀಃ ॥

## ಪುಣ್ಯಾಹವಾಚನೆ.

೨೮ ರಾಗ ಸಾವೇರಿ, ಆದಿತಾಳ ] [ ದಾಟಿ —ಗೌರಿಯುವರಸುತನಾ

ಗಿರಿಜೆಯ ವರಸುತನ । ಪಾದಾಂಬುಜಾಕೆರಗಿ ಶಾರದೆಯು ಮನಾ ॥ ಹರುಷಗೊಳಿಸುತೊರವೆನು ಶಿರಿವರನರ । ವರರಂದದಿ ಪುಣ್ಯಾಹರ್ಚನೆಯನು । ವಿರಚಿಸಿದಾ ಪದನಾ । ನೊರವೇನಾ ಶೋಭಾನೆ ॥ ಪಲ್ಲ ॥ ಮಂಗಳ ಸ್ನಾನವನು । ಗಯ್ಯುತಲೆ ಶ್ರೀ । ರಂಗನು ರಾಣಿಯನು ॥ ಅಂಗದಿ ಝುರಿಪೀತಾಂಬರ ಧರಿಸುತ । ಸಂಗಡ ಕುಳಿಸುತ ಪೌರೋಹಿತರನು । ಸಾಂಗದಿ ದ್ವಿಜವರರಿಗೆರಾಗಿ ದರೂ ॥ ೧ ॥ ಗುರುವನುಗ್ರಹಿಸಿರುವ । ಪವಿತ್ರವ । ಬೆರಳೊಳು ಧರಿಸಿ ಭವ ॥ ಪರಿಹರಿಸುವ ಸಂಕಲ್ಪವ ಗಯ್ಯುತ । ಲೆರೆಯಲು ಸತಿಜಲ । ಧರೆಗಿರಿಸುತ ದ್ವಿಜ । ವರರಕ್ಷತೆ ಶಿರದಿ ಧರಿಸಿದರು ॥ ೨ ॥ ಸ್ಥಂಡಿಲವನೆ ರಚಿಸಿ । ಗುರುಗಣಪರ । ಮಂಡಲಗಳ ಬರೆಸಿ ॥ ತಂಡುಲವಿರಿಸಿ ಪರಿ ಸ್ತರಣದ ಕುಶ । ದಂಡೆ ಗಯ್ಯುತ ಸ್ಥಾಪಿಸಿ ಕುಲದೇವರ । ಕೊಂಡಾ ಡುತ ಗ್ರಹರಾ । ಸ್ಮರಿಸಿದಾ ॥ ೩ ॥ ದಧಿಘೃತ ಕ್ಷೀರವನು । ಗೋ ಮೂತ್ರವ । ಮುದದಿ ಗೋಮಯಗಳನು ॥ ಉದಕಸಹಿತ ಪಂಚ ಗವ್ಯವ ರಚಿಸುತ । ಬದಲೊಂದು ಕಲಶದೊಳುದಕವ ತುಂಬುತ । ಸದಮಲ ಸುಮಫಲವ । ನಿರಿಸಿದರು ॥ ೪ ॥ ಚೂತಪನಸ ದಳವ । ಕೂರ್ಚವಯುವ । ಶ್ವೇತ ಸುಮಾಕ್ಷತವ ॥ ನೂತನವಸನ ಕಾಂಚನ ಪಂಚರತುನವ । ಸಾತಿಶಯದೊಳಿರಿಸುತ ಪೌರೋಹಿತ । ಪಾತಕ ಹರ ಜಪವ । ಸ್ಮರೀಸೂವ ॥ ೫ ॥ ಶ್ರುತಿಮಂತ್ರಗಳಿಂದ । ಜಲಾಧಿಪ ।

ನುತಿಯ ಧ್ಯಾನಗಳಿಂದಾ ॥ ಸ್ತುತಿಸಿ ತೀರ್ಥಂಗಳ ನುತಿಸಿ ಕಲಶಗಳ। ನತಿಭಕುತಿಯೊಳರ್ಚಿಸಿ ಫಲ ತಾಂಬೂಲ। ಹಿತದಿಂದರ್ಪಿಸುತ ನುತಿಸಿದರು ॥ ೬ ॥ ನಾಮನಕ್ಷತ್ರಗಳ। ವಾಚಿಸಿ ದ್ವಿಜ। ಸ್ತೋಮಪವಿತ್ರ ಜಲ ॥ ಸಾಮದಿ ವಧುವರರಿಗೆ ಮಾರ್ಜನಿಸುತ। ನಾರಾಯಣನೈಶ್ವರ್ಯ ಪ್ರಾಪ್ತಿಸಲೆನ। ಭಾಮೆಯರಾರತಿಯ ಬೆಳಗಿದರು ॥ ಶೋಭಾನೆ ॥ ೭ ॥ ಶ್ರೀಃ ॥

## ಆಪೋಶನೆ.

೩೯ ರಾಗ ಪೀಲು, ಆಟತಾಳ ] [ ದಾಟಿ —ಸರಸಿರುಹಾಂಬಕಿ ನಿನಾ

ಆಪೋಶನೆ ಹಾಕು ಶಿರಿಯೆ। ಇಕ್ಷು। ಚಾಪನ ಪಿತನ ಕರಾಬ್ಜಕೆ ಸುರಿಯು ॥ ಆಪೋಶನೆ ಹಾಕು ಶಿರಿಯೆ ॥ ಪಲ್ಲ ॥ ವೇದವನೊಯ್ದನ ತರಿದ। ಕೂರ್ಮ। ನಾದಿಸೂಕರ ನರಹರಿಯಾಗಿ ಮೆರದ ॥ ಆಪೋ॥ ॥ ೧ ॥ ಬಲಿಯ ದಾನವಗೊಂಡ ಕರಕೆ। ನೃಪ। ಕುಲವೈರಿ। ರಘುರಾಮವರಕರಾಂಬುಜಕೆ ॥ ೨ ॥ ಪಾತಕಿಕಂಸನ ತರಿದ। ಭೂತ। ನಾಥನಿಂದ ಸುರರ ಕೊಲಿಸುತ್ತ ಮೆರದ ॥ ೩ ॥ ಕಲಿಹರ ಶ್ರೀನಾರಾಯಣನ। ಕರ। ದೊಳಗಿತ್ತು ಜಲವನ್ನು ಪಲಿಸು ನೀ ಪ್ರಿಯನ ॥ ೪ ॥ ಶ್ರೀಃ ॥

## ಒಪ್ಪಿಸಿಕೊಡುವಹಾಡು.

೪೦ ರಾಗ ಆನಂದಭೈರವಿ, ಆದಿತಾಳ ] [ ದಾಟಿ —ಮುತ್ತಿನಚಪ್ಪರಾ

ಏಕಾದಂತನ ಪದವ। ಲೋಕೇಶನ ಸತಿಯೊಲವ। ಏಕಾಭಕುತಿಯಲಿ ಪಡೆಯುತಲಿ ॥ ಪಡೆಯುತ ಶ್ರೀರಾಮಸೀತಾ। ಸ್ವೀಕಾರದ ಪದನಾನೊರವೇನು ॥ ೧ ॥ ಮಿಥಿಲಾಪಟ್ಟಣದೊಡೆಯ। ಕ್ಷಿತಿಸುತೆಯ ಜಾನಕಿಯ। ಹಿತದಲಿ ದಶರಥನ ಸುತನಾದ ॥ ಸುತನಾಗಿಪ ಶ್ರೀರಾಮಗೆ ಸ। ಮ್ಮತಿಯಿಂದ ವಿವಾಹ ರಚಿಸಿದ ॥ ೨ ॥ ನಾಗಾಭರಣನ ಧನುವ। ಮೇಗೆತ್ತಿದವನೆನುವ। ರಾಘವನಿಗೆ ಸುತೆಯ ಪರಿಣಯ ಸಂಭ್ರಮದಲಿ ನಡೆಸುತ। ನಾಗೋಲೆಯ ವಿಧಿಯ ವಿರಚಿಸಿದ ॥ ॥ ೩ ॥ ಸುರಪೇಂದ್ರನುರುಸಭೆಯ। ಜರೆವ ಹಂದರ ಮಧ್ಯ। ಮೆರವ ಮಂಟಪದಿ ವಧೂವರರ ॥ ವಧುವರ ಪೌರೋಹಿತ ಮುಖ್ಯರು। ವರ

ಬಂಧುಜನರು ನರದರು ॥ ೪ ॥ ಸುತ್ತ ಮುತ್ತಿನ ಝಲ್ಲಿ ರತ್ನಲೋವೆ ಗಳಲ್ಲಿ । ವಿಸ್ತಾರದ ರಾಜಸಭೆಯಲ್ಲಿ ॥ ಸಭೆಯಲಿ ಸಂಗೀತ ವಾದ್ಯ । ನೃತ್ಯಾದಿಗಳಲ್ಲಿ ಮೆರೆಯಲು ॥ ೫ ॥ ಗಂಧ ಕೌಸುಮ ವೀಳ್ಯ । ದಿಂದ ಮನ್ನಿಸಿ ಸಭೆಯ । ಮಂದಿಯ ಮನವನೊಲಿಸುತ್ತ॥ವಲಿಸುತ್ತ ಬಂಧು ಗಳಲಿ ಸಂ । ಬಂಧಮುತ್ಸಹವಗೊಳಿಸುವ ॥ ೬ ॥ ಗುರುನಿರೂಪಿಸ ಸತಿಯ । ಕರತಂದು ಮಾವಯ್ಯ । ಹಿರಿಯರ ತೊಡೆಯಲಿರಿಸಾಲು ॥ ಇರಿಸಲು ನಿಮಿರಾಯ । ಧರಣೀಶನಿದಿರೊಳ್ ನಿಲಿಸಿದ ॥ ೭ ॥ ಯತ್ತಿ ತನ್ನಯ ಸುತಯಾ । ನಿತ್ತ ನಿಮ್ಮಾತ್ಮಜಗೆ । ದತ್ತಾಧಾರೆಯಲಿ ಕೃಪ ಯಲ್ಲಿ॥ ಕೃಪಯಲಿ ಪಾಲಿಪುದೆಂದು । ಪೃಥ್ವೀಶ ತೊಡೆಯೊಳಿರಿಸಿದನು॥ ॥ ೮ ॥ ಬಿಸಜಾಕ್ಷಿ ಸೀತೆಯನು । ದಶರಥೇಂದ್ರನು ತಾನು । ಒಸರು ವಶ್ರುಗಳ ಜಲವನ್ನು ॥ ಜಲವನು ಮೊಗಬವರನ್ನು । ವಸನದೊಳೊ ರಸಿ ನುಡಿದಾನು ॥ ೯ ॥ ಕೋಮಲಾಂಗಿಯೆ ನಿನ್ನ । ಪ್ರೇಮದ ಪತಿ ಯನ್ನ । ನಾಮಾದಿಗುಣದೊಳ್ಪಲಿಸುತ್ತ ॥ ವಲಿಸುತ ಸತ್ಕೀರ್ತಿಯ ಘಳಿಸುತ । ನಾಮಸಾರ್ಥಕವ ಗೊಳಿಸವ್ವ ॥ ೧೦ ॥ ಅತ್ತುಕೂಳ್ಳುತ ಸುತೆಯ । ಅತ್ತೆಕೌಸಲ್ಯೆಯ । ಸತ್ತಿರ ನಿಲಿಸಿ ಮಗಳೆನಿಸಿ ಪೊರೆಯು ವುದೆನ್ನುತ । ಲಿತ್ತಾಳು ಸತಿಯ ಗುಣಾವತಿಯ ॥ ೧೧ ॥ ಮುಡಿಯ ನೇವರಿಸುತ್ತ । ಉಡಿಯ ನರಿಗೊಳಿಸುತ್ತ । ಕಡಗಕಂಕಣವ ಪಿಡಿ ಯುತ ॥ ಪಿಡಿಯುತ ನಡುಶಿರವಾಘ್ರಾಣಿಸಿ । ಕಡುಪ್ರೀತಿಯಿಂದ ನುಡಿದಳು ॥ ೧೨ ॥ ಬಾರೇ ಬಾಮಾಮಣಿಯೆ । ಶ್ರೀರಾಮನರ ಗಿಣಿಯೆ । ಸೂರ್ಯವಂಶವನೇ ಜೆಳಗಿಸು ॥ ಬೆಳಗಿಸು ಕಡುಸತಿವ್ರತೆ ಯುನಿಸೌ। ಧರಣಿಯುತೆರ ನಿನ್ನ ಪೂರವೆ ನಾ ॥ ೧೩ ॥ ದಶರಥ ಕೌಸಲ್ಯೆ ಯರ । ಬಿಸಜಾಕ್ಷ ಸೀತೆಯರ । ಹಸೆಯೊಳು ಕುಳಿಸಿ ವೀಳ್ಯಕೊಡಿಸಿ ॥ ಕೂಡಿಸುತಲಕ್ಷತ ತಳಿದಾರತಿ । ಶಶಿಮುಖಿಯರೆತ್ತಿ ಪರಸಿದರು ॥ ೧೪ ॥ ಶ್ರೀರಾಮಗೆ ಬಳುವಳಿಯ । ನಾರಿಗೆ ನತಿಬೆಂಬಳಿಯ । ಚಾರು ಉಡು ಗರೆಯ ಸಲಿಸುತ್ತ ॥ ಸಲಿಸುತ ಪರಿಪಾಲಿಸೆನುತ । ನಾರಾಯಣ ನಡಿಯಾ ಸ್ಮರಿಸಿದರು ॥ ೧೫ ॥ ಶ್ರೀ ॥

## ತಾಂಬೂಲದಾನ.

೬೧ ರಾಗ ಕೇದಾರ, ರೂಪಕತಾಳ ] [ ದಾಟಿ - ಸ್ವೀಕರಿಸೊ ಕಮಲ

ಕರುಣಿಸಯ್ಯ ಕಂಜನೇತ್ರನೆ । ಕಮನಿಯಗಾತ್ರನೆ । ಕರುಣಿ ಸಯ್ಯ ಕಂಜನೇತ್ರನ ॥ ಪಲ್ಲ ॥ ಅಗರು ಗಂಧ ಕುಸುಮ ಗಂಧ । ಮೃಗ ಮದಂಗಳ ಸೊಗಸಿನಿಂದ ಕೂಡಿ ಮಂದ । ನಗೆಯ ಮೊಗಕ ಬಳಿವೆ ನೆಂದು ॥ ಕರುಣಿಸಯ್ಯ ॥ ೧ ॥ ಲಲಿತ ಕಂಬುಕಂಧರವ ಪೊಳೆವ ಹೃದ ಯವ ॥ ನಲವಿನಿಂದ ತೋರೂ ಕರವ । ವಲಪಿನಿಂದ ಬಳಿವೆ ಗಂಧ ॥ ॥ ೨ ॥ ಫುಲ್ಲನಯನ ಸಲ್ಲಲಿತದ ಮುಲ್ಲೆ ಮಲ್ಲಿಗೆ ॥ ಉಲ್ಲವಾತಿನಿಂದ ಮುಡಿಗೆ । ಮೆಲ್ಲ ಮುಡಿಸುವೆನು ಸಮನಸು ॥ ೩ ॥ ಪೊಗಯುಕ್ತವಾದ ದಿವ್ಯನಾಗವಲ್ಲ್ಯವ ॥ ಭೋಗಯೋಗವಾಗಲೆಂದು । ಬೇಗನೀವೆ ನಾಗ ಶಯನ ॥ ೪ ॥ ಸುರಸ ಭೋಜನೋತ್ತರದೊಳು । ಸರಸವೊಂದಲು ॥ ಸರಸದಿಂದ ನವಿಯೊ ವೀಳ್ಯ ॥ ಶಿರಿಯರಮಣ ಶ್ರೀ । ನಾರಾಯಣ ॥ ಕರುಣಿಸಯ್ಯ ॥ ೫ ॥ ಶ್ರೀಃ ॥

## ದಿಬ್ಬಣ ಇಳಿಸಿಕೊಡುವಲ್ಲಿ.

೬೭ ರಾಗ ಕಲ್ಯಾಣಿ, ಆದಿತಾಳ ] [ ದಾಟಿ --ಕಮಲನಯನಾ ಬೇಗಬಾ

ಕಳುಹಿಪುದವ್ವ ಬಾಲೆಯ । ಸುಶೀಲೆಯ ॥ ಕಳುಹಿಪುದವ್ವ ಬಾಲೆಯ ॥ ಪಲ್ಲ ॥ ಕಳುಹಿಸೆ ಬಾಲೆಯ । ಸುಲಲಿತ ಲೀಲೆಯ । ಅಳಿಯನ ಸಹಿತಲೆ । ಬಳುವಳಿ ಕೊಡುತಲೆ ॥ ಕಳುಹಿಪು ॥ ಅನುಪಲ್ಲ ॥ ಎನ್ನವದೇನ್ ತವ । ಕನ್ನೆಯ ಪುಣ್ಯವ ॥ ರನ್ನಸುಗುಣಾನು ನಂ । ಪನ್ನನು ದೊರೆತನೂ ॥ ೧ ॥ ವೇದಶಾಸ್ತ್ರವ ನವ । ಬೋಧವನರಿ ಯುವ ॥ ಶೋಧಿಸಿ ಸಕಲವ ನೋಡಿದ ಧೀರಾಯುವ ॥ ೨ ॥ ಸಂತತ ಸುಖಧನ । ಸಂತತಿ ಭೂಷಣ ॥ ಮುಂತೆವೃದ್ಧಿವಗುಣ । ಕಾಂತೆಯ ಯೋಗ್ಯತನ ॥ ೩ ॥ ಪಾತ್ರಳೆಮ್ಮಯ ಕುಲ । ಗೋತ್ರಕಿನ್ನೀಕಯ ॥ ಗಾತ್ರದಿ ನಿಮಗೆ ಸ್ವ । ತಂತ್ರವಿಲ್ಲ ನಿಶ್ಚಯ ॥ ೪ ॥ ಮಾತೆಯತ್ತೆಯೆ ನಿಜಾ । ತಾತ ಮಾವ ಸಾಹಜ ॥ ಪ್ರೀತ ನಾರಾಯಣ । ರೀತಿನೀತಿಯು ಘನ ॥ ೫ ॥ ಶ್ರೀಃ ॥

## ದಿಬ್ಬಣ ಇಳಿಸಿಕೊಡುವದು

೪೩ ರಾಗ ಆನಂದಭೈರವಿ, ಅಟತಾಳ ] [ ದಾಟಿ —ಯೇನಾಮಾಡಲಿ

ಎಂತು ಕಳುಹಲೆನ್ನ ಸುತೆಯ । ಕಾಂತಿಯುತೆಯ ॥ ಕಂತು ತಾತನೆ ಕಾಯೊ । ಸೌಭಾಗ್ಯವತಿಯ ॥ ಯೆಂತೂ ॥ ಪಲ್ಲ ॥ ದೇವರ್ಕಳಿಗೆ ಹೇಳಿ ಹರಿಕೆ । ಪಡೆದುದಕೆ । ಲಾವಣ್ಯವತಿಯಾಗಿ । ರೂಪವಿದರ್ುದಕೆ ॥ ಕೋವಿದವರಗಿತ್ತು ಸಾರ್ಥಕವ್ಯಾತಿಂತು । ಭಾವಿಸಲೀದಿನ। ಕಾವಣವಿಳಿಸಿ ನಾ ॥ ನೆಂತು ॥ ೧ ॥ ಅತಿಪ್ರೀತಿಯಿಂದ ಪಾಲಿಸುತ । ಮಾತಾಲಿಸುತ । ಮತಿವಂತೆಯೆನಿಸಿ ಸಂತತವು ಪೋಷಿಸುತ ॥ ಸತಿಯುರ ಸೀತಿಯು । ಕಥೆಯು ಬೋಧಿಸಿ ಶ್ರೀಯ ಪತಿಯನುತಿಯ ಪದ್ಯಾ । ತತಿಯು ವೇಳಿಸಿದೆನ ॥ ೨ ॥ ಸ್ವಾದುವಾದಡಿಗೆಯ ಗೈವ । ನಾನಾವಿಧವ । ಶೋಧಿಸಿ ಶುಚಿಗೈವ ಸಾಧ್ವಿಯ ಗುಣವ ॥ ಬೋಧಿಸಿ ಪತಿಭಕ್ತಿ । ಸಾಧುಗಳೊಳು ಪ್ರೀತಿ । ಯಾದೀ ಸದ್‌ಗುಣಕೃತಿ । ಯೋದಿದ ಸತಿಯು ॥ ೩ ॥ ದ್ವೇಷ ದುರಾಶೆಗಳಿಲ್ಲ । ಸಟಿಸಲ್ಲ । ರೋಷದಿ ನುಡಿದರ ಬೆದರುವಳಲ್ಲ ॥ ಶ್ರೀಶ ನಾರಾಯಣ । ಕ್ಲೇಶಾಗೈಸದೆ ಮುನ್ನ । ತೋಷದಿ ಬಂಧುಗಳ್ । ಪೋಷಿಸಾಲಿವಳನ್ನ ॥ ಯೆಂತು ॥ ೪ ॥

## ಚಟ್ಟೆಹಾಕುವದು

೪೪ ರಾಗ ನಟಭೈರವಿ, ಆದಿತಾಳ ] [ ದಾಟಿ —ಮೋಹನ್ನಮನೋಹರಾ

ಬಾರವ್ವ ಬಾಮಾಮಣೀ । ಕೀರಸುವಾಣೀ । ಬಾರವ್ವ ಬಾಮಾಮಣೀ ॥ ಪಲ್ಲ ॥ ಸೀರೇ ಪಯ್ಯಾರೇ ಶೃಂಗಾರೇ ಮಾರನಗಿಣಿ ॥ ಬಾರವ್ವ ॥ ॥ ಅನುಪಲ್ಲ ॥ ಬಾರೇ ಪನ್ನಗವೇಣಿ । ತೋರೇ ಸುಂದರಪಾಣಿ । ಶೇರಿಸಿ ಗೌರವ । ಚಾರೂಚಟ್ಟವ ಗೈವ ॥ ಬಾರವ್ವ ॥ ೧ ॥ ಮತಿವಂತೆ ನೀ ಪುಷ್ಪ । ವತಿಯಾದ ಕುರುಹಪ್ಪ ॥ ಜೊತೆಹಸ್ತದಿಂ ಪೀತ । ವಿತವಾಗಿ ಬಡಿಯುತ್ತ ॥ ೨ ॥ ಕಸ್ತೂರಿಸಾರಣೆಯ । ಭಿತ್ತಿಯುಮೇಲೀನಯು ॥ ಉತ್ತುಮದರಶಿನ । ವತ್ತಿಬಳಿಯೆ ಮುನ್ನ ॥ ೩ ॥ ಕಮಲನಾಭನ ಪ್ರೀತೆ । ವಿಮಲಗುಣಾನ್ವಿತೆ ॥ ಕ್ರಮದಿ ಸಂಭ್ರಮದಿ ನೀ । ನಮಲಾ ಚಟ್ಟವ ಗಯ್ಯೆ ॥ ೪ ॥ ಕೀರಸುವಾಣಿಯೆ । ನಾರಾಯಣನ

ಪ್ರಿಯೆ ॥ ಬಾರೇ ಮುದದೋರೆ ನಗೆ । ಬೀರ ಸುಂದರಕಾಯೆ । ಜಾರವ್ವ ॥ ೫ ॥ ಶ್ರೀ ॥

## ಸೂವಿಹಾಡು.

೪೫ ರಾಗ ಕಮಾಚ್, ರೂಪಕತಾಳ ] [ ದಾಟಿ —ಈತನೇವಹವ್ವಾರ

ಭಾವಕೀಯರ ಬನ್ನಿರೀಗ । ಸೂವಿಪಾಡುವ ॥ ದೇವಿಸೀತೆಗೀ ವಿನೋದ । ಭಾವದೋರುವ ॥ ಭಾವಕಿ ॥ ಪಲ್ಲ ॥ ಜಲಜನೇತ್ರೆ ಪುಷ್ಪವತಿಯು । ಬಳಿಯೊಳಂದದಿ ॥ ಕಲಶ ಕನ್ನಡಿಯನೀಯು । ಲೊಲಿದು ಚಂದದಿ ॥ ೧ ॥ ಹುರಿದ ಯೆಳ್ಳು ಅರಳುಪುಡಿಯು । ಬರಸಿ ಗುಡಕಾಯು ॥ ವಿರಚಿಸುತ್ತ ಸವಿಖಜ್ಜಾಯು । ಹರಿಯು ಭಕುತಿಯಾ ॥ ೨ ॥ ಸುರುಚಿರಾಲಂಕಾರದಿಂದ । ಮೆರವ ತರುಣಿಯು ॥ ಸರಸದಿಂದಲೆಡೆಯನಿಕ್ಕಿ । ಯೆರದು ಘೃತವಯು ॥ ೩ ॥ ಸೂವಿ ಸೂವಿ ರಾಮಚಂದ್ರ । ಸೂವಿ ಶ್ರೀವರಾ ॥ ಸೂವಿ ನಾರಾಯಣ, ಶುಭಕರಾ ॥ ಸೂವಿ ಸುಖಕರಾ ॥ ಭಾವಕಿಯರ ॥ ೪ ॥ ಶ್ರೀ ॥

## ಶೋಭನದಲ್ಲಿ.

೪೬ ರಾಗ ಜೇಹಾಗ್ ಸೋಟು, ಛಾಪುತಾಳ ] [ ದಾಟಿ —ಸರಸವಿದೇಸಮರ

ಶಿರಿಸತಿಯು ಗಿರಿಸುತೆಯು । ಚರಣಕೆ ಮಣಿವೆ ಸರಸ್ವತಿಯು ॥ ಶರಣೆಂಬೆ ಬಲಗೊಂಬ । ಕರಿಮುಖ ಗಣನಾಥನ ಕೃಪಯು ॥ ಶಿರಿ ॥ ॥ ಪಲ್ಲ ॥ ದಾನವನಾಶನ ಗರ್ಭಾ । ಧ್ಯಾನವ ಮಾಡುತ ಸತಿಗೆ ಶುಭಾ ॥ ಸ್ನಾನದಿ ತಾರೆಗಳಿರಲು ಸಭಾ । ಸ್ನಾನದಲಿರ ಹರಿಶಶಿಯ ಪ್ರಭಾ ॥ ೧ ॥ ಅಂಗನೆ ಸೌಭದ್ರೆಯು ತಾ । ರಂಗನರಸಿ ರುಗ್ಮಿಣಿಸಹಿತಾ ॥ ತುಂಗ ಹಸೆಯನೆ ಹಾಸಿ । ಹಿಂಗದೆ ತಾ ಕುಳ್ಳಿರಿಸಿ ॥ ೨ ॥ ಬಾ ಚದುರೆ ನಾಚದಿರೆ । ವಾಚಿಸು ಪತಿಯೊಳು ಗಂಭೀರೆ ॥ ಬಾಚಣಿಸೂ ಸುಮಮುಡಿಸು । ಈ ಚಾಪೆಯನೆ ಅಲಂಕರಿಸು ॥ ೩ ॥ ಪರಿಮಳಗಂಧವ ಪೂಸೆ । ಯೆರೆಯನ ಸಂತಸಗೊಳಿಸೆ ॥ ಸುರಸದ ವೀಳ್ಯವ ನೀಡೆ । ಸರಸದಿ ಕಾಂತನ ಕೂಡೆ ॥ ೪ ॥ ಮೂಢಮತಿಯೊಳು ವತಿಯು । ಕೂಡಲು ಮೂಡುವ ತನಯು ॥ ಹೇಡಿಯು ತಾ ಜನಿಯಿಸುವ । ಕೇಡನು ವಂಶಕ

ತರುವ ॥ ೫ ॥ ಮಾಜದೆ ಲೋಕದ ಹಿತವ । ರಾಜಿಕಧರ್ಮವನರಿವ ॥ ಮೂಜಗವ ಮೆಚ್ಚಿಸುವ । ರಾಜನೆ ತಾನುದಯಿಸುವ ॥ ೬ ॥ ವನಜ ಶರಾಂಗದ ಕುವರ । ಜನಿಸಲು ನೀ ನೆನೆ ನಾರಾ ॥ ಯಣನೊಲಿವಾತನೆ ದೊರೆವ । ಘನಮನತನವನು ಪಾಲಿಸುವ ॥ ೭ ॥ ಶ್ರೀಃ ॥

## ಉಡಿಲು ತುಂಬಿಸುವದು.

೪೭ ರಾಗ ಕಾಂಬೋಧಿ, ಆದಿತಾಳ ] [ ದಾಟಿ —ಬೇಡೂವೆ ಕಾಂತನೇ

ಮುಡಿಲಾನೆ ತುಂಬಿರೆ । ಮುಡದಿಮಣಿಯರೆ ॥ ಜಡಜನಯನ ಸತಿ । ಗುಡುಗರೆ ಇಡುತಲೆ ॥ ಉಡಿಲನೆ ತುಂಬಿರೆ ॥ ಪಲ್ಲ ॥ ಅತ್ತಿಗೆ ಮುದದಲಿ। ಮುತ್ತಿನಕ್ಷತೆ ತಳಿ ॥ ಯುತ್ತ ತಂಡುಲಫಲ। ವಿತ್ತು ಕಂಚು ಕಗಳ॥ ಮುಡಿಲಾನೆ ॥ ೧ ॥ ಬಂಧುಗಳೆಲ್ಲರ । ನಂದದಿ ಸುರುಚಿರ ॥ ಕುಂದಣಾಭರಣಗ । ಳೊಂದೊಂದನೀಯೂತೀಗಾ ॥ ೨ ॥ ಶರ್ಬಾನ ವಯದೊಳು । ಗರ್ಭಮುಂಟಾಗಲು ॥ ಅರ್ಭಕಾ ಜನಿಸಲು । ಉಬ್ಬಿದ ತೋಷದೊಳು ॥ ೩ ॥ ,ಭೂಸುರರಕ್ಷತೇ । ಸೂಸಿದರ್ ಪರಸುತೆ ॥ ಶ್ರೀಶನಾರಾಯಣ । ಲೇಸನೀಯುಲೂ ಘನ ॥ ೪ ॥ ಶ್ರೀಃ ॥

## ಬಾಗಲು ತಡಿವದು.

೪೮ ರಾಗ ಶಂಕರಾಭರಣ ಅಟತಾಳ ] [ ದಾಟಿ —ಅಳಲ್ವಾ ತಾವರೆಯಂತೇ

ಇಂದಿರಾಧವಪಾದ । ದ್ವಂದ್ವಕೊಂದಿಸಿ ಶೂಲೀ । ನಂದನನನು ಸ್ಮರಿಸಿ । ಶಾರದೆಯ ಭಜಿಸಿ । ಗಂಧವಾಹನ ಸ್ತುತಿಸಿ ॥ ಇಂದುಧರ ನಡಿಗೆರಗಿ ಕವಿಜನ । ವೃಂದವನು ನುತಿಗೈದು ಗುಣಗಣ । ಸಿಂಧು ಹರಿ ಚರಿತೆಯನೊರವೆ ಮನ । ದಂದು ಭಕ್ತಿಯೊಳಾಲಿಸಲು ಬೇ । ಕಿಂದೂ ವೋದದಲಿ ಸುಜನಾಳಿ ಶೋಭಾನೆ ॥ ೧ ॥ ದ್ವಾರಾವತಿಯೊಳ್ ಶಿರಿ । ನಾರಿಯೊಡೆಯ ಹರಿ । ಸಾರಿ ಶಂಕರನಿಂದಲಿ । ಸ್ಮರನ ಪಡೆಯುತಲಿ ನಾರೀ ರುಗ್ಮಿಣಿಗರ್ಭದಲಿ ॥ ಮಾರನುದಯಿಸಲಾ ಸತಿಯುಳಲಿ। ತೋರೆ ಗರ್ಭದ ಲಾಂಛನವು ಬಳಿ । ಕಾ ರಮಾಧವ ತೋಷವಡುತಲಿ । ಭೂರಿ ದ್ವಿಜವರರ ಕರಸುತಲ್ಲಿ ॥ ಚಾರೂ ಸೀಮಂತಾ ರಚಿಸಿದ ॥ ೨ ॥

ವಿಪ್ರರಾಶೀರ್ವಾದ ಕ್ಷಿಪ್ರದಿ ಪಡೆಯುತ್ತ । ಸುಪ್ರಭಸಭೆಯಿಂದಲಿ। ಸತಿ ಸಹಿತ ಗ್ರಹಕ್ಕೈ । ತಪ್ಪುದೀಕ್ಷಿಸಿ ದ್ವಾರದಲಿ ॥ ಸುಪ್ರವೀಣೆ ಸುಭದ್ರೆ ಕರದಲಿ । ಅಪ್ರಮೇಯನ ತಡದು ಮುದದಲಿ । ಸುಪ್ರಲಾಪದ ಭಾಷಿತಗಳಲಿ । ಸುಪ್ರಸನ್ನರ ಪೊಗಗುಡದೆ ದ್ವಾ । ರಪ್ರದೇಶದಲಿ ನಿಲಿಸಿದಳು ॥ ೩ ॥ ಬಡನಡುವಿನಬಾಲೆ । ಬಿಡು ದ್ವಾರವ ಸುಶೀಲೆ । ತಡೆದು ದ್ವಾತಕೆ ಜೋಮಾಲೆ ಕೊಡುವೆನೀವೇಳೆ । ಯೆಡೆಯಿಕ್ಕಲಾಯ್ತು ಕೇಳೆ ॥ ಶಿಡಗರವನೆನ್ನೊಡನೆ ತೋರದೆ । ನುಡಿ ಮನದೊಳಿಹ ವಾಂಛಿತವನೆ । ನ್ನೊಡನೆ ಕೊಡಿಸುವೆ ತಡೆಯದೀಕ್ಷಣ । ಜಡಜನಯನೆ ಸುಧಾಂಶುವದನೆ ॥ ಬಿಡೆ ದ್ವಾರವೀಗಾ । ನಡೆ ಬೇಗ ॥ ೪ ॥ ಕಮಲನೇತ್ರನೆ ನಿನ್ನಾ । ರಮಣೀಯೊಡನೆ ಯೆನ್ನಾ । ಕ್ರಮಿಸುತ ಗಮಿಸಲು ನಾ । ಬಿಡಲಾರೆನಣ್ಣಾ । ಕ್ರಮದಿ ಪೋಗುವದೆ ಬಣ್ಣಾ ॥ ರಮಣಿಯರಿಗೋಸುಗವೆ ಸುಮನಸ। ಸುಮವ ನೀ ತರಿಸಿತ್ತೆ ಯೆನ್ನೊಳು । ಮಮತೆಯುಳ್ಳಡೆ ಮನ್ಮನದ ನಿಜ । ಭ್ರಮೆನಿವಾರಿಸಿ ಪೋಗದಿರೆ ನಾ ॥ ಬಿಡೆ ದ್ವಾರಾವೀಗ ನಡೆ ಬೇಗ ॥ ೫ ॥ ತರುಣಿರನ್ನೆಯೆ ಕೇಳು । ಮರೆಗಯ್ಯಾದೆನ್ನೊಳು । ವರೆ ಮನದಿರವೀಗಲು । ಕರಭೂಷಣಗಳು ಸುರುಚಿರಹಾರಂಗಳು ॥ ಮೆರವ ಕಂಠೀಸರವೊ ಕಿಟಿಯುಂ। ಗುರವೊ ಪದನೂಪುರವೊ ಮೇಣಾ । ಬೆರಗಿನುರುತರ ಝುರಿಯುಶೀರೆಯೊ । ಮಿರುಪ ಕಂಚುಕ ತರಿಸಿ ಕೊಡುವೆ ॥ ೬ ॥ ಶ್ರೀಶಾ ಕೌಸ್ತುಭರತ್ನ । ಭೂಷಾವಿಭೂಷಣ । ತೋಷಿಸುವವಳಲ್ಲ ನಾ । ಬೆಡಗಿನವರುಡುವ । ವಾಸಾ ಕಂಚುಕವಲ್ಲೆನಾ ॥ ಶೇಷಶಯನ ಸುರೇಶ ಯೆನಗೆ ಸು । ವಾಸಿನಿತ್ವದೊಳಾಶೆಯಲ್ಲದೆ । ವೇಷದಾಲಂಕಾರದಲಿ ಮನ । ವೀಸದೆನ್ನಭಿಲಾಷೆ ಬೇರ್‍ರೈ ॥ ಬಿಡೆ ದ್ವಾರಾ ॥ ೭ ॥ ಶ್ವೇತವಾಹನ ರಾಣಿ । ಶೀತಾಂಶುವದನೆ ನೀ । ಮಾತಿನೊಳತಿಭಾಷಿಣಿ । ಕಾಳಾಹಿವೇಣಿ । ಸೋತೆ ನಿನ್ನೊಳು ಭಗಿನಿ ॥ ಭೀತಿಯಿಲ್ಲದೆ ಪೇಳು ತವ ಮನ । ದಾತುರವ ನಾನೀವೆ ನೀಕ್ಷಣ । ಯೇತರದು ನೀತಿಯಿದು ತಡೆವುದು । ಖಾತಿಗೊಳಿಸದೆ ತೆರಳು ಮುಗುಧೆ ॥ ಬಿಡೆ ದ್ವಾರವೀಗ ॥ ೮ ॥ ಅಂಬುಜಾಂಬಕ ಕೇಳು

ನಂಬಿದ ಜನರೊಳು । ತುಂಬಿದೆ ದಯ ನಿನ್ನೊಳು । ತರಳನ ಪೊರೆಯಲು । ಕಂಭದಿಂದಿಳಿದೆಯಲ್ಲೊ ॥ ತುಂಬಿರುವ ತವ ಸತಿಯು ಗರ್ಭದೊ । ಳಿಂಬಿನಿಂ ಸುತೆಯುದಿಸಿದಡೆ ಕರು । ಣಾಂಬುಧಿಯೆ ಮಮ ತರುಣಗೀಯುವೆ । ನೆಂಬ ಭಾಷೆಯನೀಯದಿರೆ ನಾ ॥ ಬಿಡೆ ॥ ॥ ೯ ॥ ಮತ್ತಕಾಶಿನಿ ನಿನ್ನ ಚಿತ್ತವಿದ್ದಂತೆ ನಾ । ನಿತ್ತಪೆ ಸುತೆಯುತ್ಪನ್ನ । ವಾಗಲ್ಕೆ ಮುನ್ನಾ । ಇತ್ತೀನರ್ಜುನಗೆ ನಿನ್ನ ॥ ಅತ್ತುಕೊಳದಿರು ಮನದ ಸಂಶಯ । ಕಿತ್ತುಕಳೆ ನೀನೆನುತ ಭಾಷೆಯ । ಬಿತ್ತರಿಸೆ ಕದ ಬಿಡಲು ಸತಿಸಹ । ಮತ್ತೆ ಪೊಕ್ಕನು ಸದನವನು ತಾ ॥ ಚಿತ್ತಜನಯ್ಯ । ರಮಾಪ್ರೀಯಾ ॥ ೧೦ ॥ ಲಲನೆಯನೊಡಗೊಂಡು । ಕುಲದೇವರನು ಕಂಡು । ನಲವಿಂದ ನಮಿಸಿಕೊಂಡು । ಗುರುಹಿರಿಯರಿಂಗೆ । ಫಳಿಲ ನೊಂದಿಸಿ ಬೀಳ್ಕೊಂಡು ॥ ಬಲಗೆರಗಿ ನೆರದಿರುವ ಬಾಂಧವ । ಬಳಗ ಪರಿಜನಗಳನು ಭೋಜನ । ದಲಿ ದಣಿಸಿ ನಾರಾಯಣಾಂಶನು । ನಲಿದು ನರಲೀಲೆಯಲಿ ತಾನು ॥ ವಲಿದು ವಧುವರರ । ಪೊರೆವನು ॥ ಶೋಭಾನೆ ॥ ೧೧ ॥ ಶ್ರೀಃ ॥

## ಮದುಮಕ್ಕಳಿಗೆ ಬಡಿಸುವದು.

೪೯ ರಾಗ ಆರಭಿ, ಅಟತಾಳ ] [ ದಾಟಿ —ವೆಂಕಟರಮಣನೇ

ಶ್ರೀರಮಾಧವ ರಾಣಿ । ಚಾರುಪನ್ನಗವೇಣಿ । ನಾರೀಮಣಿ ರುಗ್ಮಿಣಿ । ನೀರೆ ಗರ್ಭಿಣಿಗೆ ಸಿಂ । ಗಾರ ಮುಡಿಸಿ ಮಿಗೆ । ವಾರಿಜಾಕ್ಷಿಯರಾಗಾ । ಸೇರಿ ಬಡಿಸೆ ಬೇಗ । ಸಾರಿದರತಿಮೋದದಿ ॥ ೧ ॥ ಕಡಲಶಯನನೆಡ । ದೆಡೆಯೊಳ್ ಕುಳಿಸಿ ಬಡ । ನಡುವಿನ ಬಾಲೇಯರು ॥ ಕೊಡಿಯೆಲೆಗಳನಿಡುತಡಿಯ ಮಂಡಲ ಗೈದು । ಕಡುಬು ಹೋಳಿಗೆಯನ್ನ । ಬಡಿಸಾಲು ಪರಮಾನ್ನ । ಮಡದಿಯು ಪತಿಗಾಕ್ಷಣ ॥ ೨ ॥ ತುಪ್ಪ ಖಜ್ಜಾಯವ । ಹಪ್ಪಳ ಸೂಪವ । ಅಪ್ಪ ಚಕ್ಕುಲಿ ಭಕ್ಷವ ॥ ವಪ್ಪುವ ಶಾಕವ । ವಪ್ಪದಿ ಬಡಿಸುತ್ತ । ಸರ್ಪಶಯನಗೆ ಕಂ । ದರ್ಪನ ರಾಣಿಯು । ಆಪೋಶನ ಹಾಕಲು ॥ ೩ ॥ ಬಂಧುಗಳತಿ ಮೋದಾ । ಪೊಂದುತ ಬಡಿಸಿದ । ರಂದು ಸೀಮಂತಿನಿಗೆ ॥ ಕುಂದಣಾ

ಭರಣಾರವಿಂದಾದಿ ಸುಮಭಾರ । ಚಂದನವಾಂಬರದಿಂದತಿಬೇಸರ । ತಂದುದು ಮುಖಬೆವರಾ ॥ ೪ ॥ ಸಾರದ ಹಾರವು । ಸೇರದು ಖಾರವು । ತೋರುವದತಿಸಾರವು ॥ ನಾರಾಯಣ ದಯಾ । ದೋರಲು ಸುದತಿಯು । ಭೂರಿ ಭಾಗ್ಯದಿ ಭಯ । ಸಾರಿ ಸಂತಸದೊಳು । ಮಾರನು ಜನಿಸುವನೂ ॥ ೫ ॥

## ಗರ್ಭಿಣೀ ಹೂಬಿಚ್ಚುವದು.

೫೦ ರಾಗ ಕಾಂಬೋಧಿ ಆದಿತಾಳ ] [ ದಾಟಿ —ನಿಜವೇಸೋ ರಮಣಾ

ಸ್ಮರಪಿತ ಜಡೆಯ ಬಿಡು ನಾಥಾ । ಭಕತನುತ । ಹಿತಾಚರಿತ ॥ ಸ್ಮರಪಿತ ॥ ಪಲ್ಲ ॥ ಸುರವರವಂದಿತ ಸ್ಮರಹರಪೂಜಿತ । ಶಿರಿಪ್ರೀತಾ ಭವರಹಿತಾ ಸ್ಮರಿಪೆ ನಿರತ ॥ ಸ್ಮರಪಿತ ॥ ೧ ॥ ಶರ್ಬನ ಸಖನೇ ಗರ್ಭಿಣಿ ನಾನೆ । ಮಬ್ಬಿನೊಳೇನಬ್ಬರವೆ । ಹಬ್ಬಿದೊಲವೆ ಸ್ಮರಪಿತ ॥ ॥ ೨ ॥ ಸತಿಯರ ಚಂಚಲ । ಮತಿಗೆ ಸುನಿಶ್ಚಲ । ಪತಿಭಕತೀ ಸುತ ಪ್ರೀತಿ । ಹಿತದುಪಕೃತಿ ॥ ಸ್ಮರ ॥ ೩ ॥ ಗುರುಹಿರಿಯುರೊಳುರು । ತರ ಭಕತಿಯ ಸುರು । ಚಿರ ಶುಚಿಯು ॥ ಸುರಶಚಿಯು । ತೆರನ ಶಿರಿಯು ॥ ಸ್ಮರ ॥ ೪ ॥ ವಾರುಧಿಶಯನನೆ । ನಾರಾಯಣನೆ । ಮಾರಮಣ । ತವ ಕರುಣ । ಭರಣ ತೊಡಿಸು ॥ ಸ್ಮರಪಿತ ॥ ೫ ॥ ಶ್ರೀಃ ॥

## ಗರ್ಭಿಣಿಯು ಮುಂದೆ ಹಾಡುವುದು.

೫೧ ರಾಗ ಕಮಾಚ್, ಆದಿತಾಳ ] [ ದಾಟಿ —ಗಜವದನಾ ಪಾಲಿಸೋ

ಗಣನಾಧ ಪಾಲಿಸು । ಗುಣದಾತ ಲಾಲಿಸು ॥ ಗಣನಾಥ ಪಾಲಿಸು ॥ ಪಲ್ಲ ॥ ಶಿರವನು ಬಾಗಿಸಿ । ಕರವ ಮುಗಿವೆವು ॥ ಶರಣರಿ ಗನುದಿನ । ಸುಖವನು ಕೊಡು ॥ ಗಣನಾಥ ಪಾಲಿಸು ॥ ೧ ॥ ನಡೆ ನುಡಿಯೊಳು ಕ । ನ್ನಡ ಭಾಷೆಯೊಳು ॥ ಕೆಡೆನುಡಿಯಾಡದ । ದೃಢ ಮತಿ ಕೊಡು ॥ ಗಣನಾಥ ॥ ೨ ॥ ವಿದ್ಯೆಯ ಘನತೆಯು । ಬುದ್ಧಿಯ ನೀವ ॥ ಸಿದ್ಧಿವಿನಾಯಕ । ಶ್ರದ್ಧೆಯ ಕೊಡು ॥ ಗಣನಾಥ ॥ ೩ ॥ ಕಾಯಕೆ ಸೌಖ್ಯವ । ನೀಯುವ ದೇವ ॥ ಕಾಯಜಪಿತ ನಾ । ರಾಯಣ ಪ್ರಿಯ ॥ ಗಣನಾಥ ಪಾಲಿಸು ॥ ೪ ॥ ಶ್ರೀಃ ॥

೫೨ ರಾಗ ಕಮಾಚ್, ಆದಿತಾಳ.] [ದಾಟಿ —ಸಾರಸಸಮಮುಖ

ಶ್ರೀವರ ವಿಧಿಹರನುತಚರಣ । ಪಾಲಿಸು ನಾರಾಯಣ ॥ ಶ್ರೀವರ ವಿಧಿಹರನುತಚರಣ ॥ ಪಲ್ಲ ॥ ಕೇಶವ ನಾರಾಯಣ ॥ ಮಾಧವ ಗೋವಿಂದ । ಮೌಕುಂದ । ಶ್ರೀಶ ವಿಷ್ಣು ಮಧುಸೂದನ ನಿತ್ಯಾನಂದ । ಪೋಷಿಸೆಮ್ಮನು ತ್ರಿವಿಕ್ರಮ ವಾಮನ । ಹೇ ಶ್ರೀಧರ ಹೃಷೀಕೇಶ ಪರೇಶನೆ ॥ ಶ್ರೀವರ ॥ ೧ ॥ ಪದ್ಮನಾಭ ದಾಮೋದರ ಸಂಕರುಷಣ । ಗುಣಪೂರ್ಣ । ಪದ್ಮಾಸನಿಪತಿ ವಾಸುದೇವ ಪ್ರದ್ಯುಮ್ನ ॥ ಪದ್ಮಜಾರ್ಚಿತನಿರುದ್ಧನೆ ಮಮಹೃತ್ । ಪದ್ಮ ಸದ್ಮದೊಳಗಿರು ಪುರುಷೋತ್ತಮ ॥ ಶ್ರೀವರ ॥ ೨ ॥ ಮೆಚ್ಚು ನೀನೆನಗಧೋಕ್ಷಜ ಶ್ರೀನರಸಿಂಹಾಶುಗಬ್ರಹ್ಮ । ರಚ್ಯುತ ಜನಾರ್ದನನೆ । ಪೊರೆಯೆನ್ನುವರಮವು ॥ ಹೆಚ್ಚಿನ ಭಕುತಿಯನರಿಯೆನುಪೇಂದ್ರನೆ । ನಿಶ್ಚಲಪದ ಪಾಲಿಸು ಹರಿ ಕೃಷ್ಣನೆ ॥ ಶ್ರೀವರ ॥ ೩ ॥ ಶ್ರೀಃ ॥

೫೩ ರಾಗ ನಾದನಾಮಕ್ರಿಯೆ, ಆದಿತಾಳ ] [ದಾಟಿ —ಶಂಕರಿದೇಹಿಮೆ

ಶ್ರೀವರ ಶುಭಕರ ಜಯ ಜಯ ಜಯಮಂಗಳಂ । ಭೂವರ ದಯಾಕರ ನಿರಾಶ್ರಯ । ಶುಭಮಂಗಳಂ ॥ ಶ್ರೀವರ ॥ ಪಲ್ಲ ॥ ವಾರಿವಿಹಾರಿ । ವರಗಿರಿಧಾರಿ । ಘೋರಭೂದಾರ ಸುವೀರ ನರಹರೀ ॥ ಶ್ರೀವರ ॥ ೧ ॥ ಪೊಡವಿಯ ಬೇಡಿದೆ । ಕೊಡಲಿಯ ಪಿಡಿದೆ । ಮಡದಿಯೊಡನೆ ಬಿಡದಡವಿಯೊಳ್ ನಡದೇ ॥ ಶ್ರೀವರ ॥ ೨ ॥ ಶಂಬರರಿಪುಪಿತಾ । ಅಂಬರರಹಿತ ॥ ಡೊಂಬವಾಜಿ ರಾವುತ । ಶಂಭುಧಾತನುತ ॥ ಶ್ರೀವರ ॥ ೩ ॥ ಈ ಸುಕೃತಿಯಘನ । ದೋಷನಿವಾರಣ ॥ ಶ್ರೀಶನಾರಾಯಣ । ದಾಸಪೋಷಕನೆ ॥ ಶ್ರೀವರ ॥ ೪ ॥ ಶ್ರೀಃ ॥

೫೪. ರಾಗ ಕಾಂಬೋಧಿ, ರೂಪಕತಾಳ ] [ದಾಟಿ —ಯೇಮಿಮಾಯಮು

ಯೇನಿದೆಮ್ಮನು ಅಗಲಿಪೋಗುವೆ ಪ್ರಾಣನಾಥನೆ । ನೀನೆ ॥ ಯೇನಿದೆಮ್ಮನು ॥ ಪಲ್ಲ ॥ ಕಾಣದುಳಿಯಲಾರದೆಮ್ಮ । ಪ್ರಾಣ ಜಾಣ । ಹೇನಾರಾಯಣ ॥ ಯೇನಿ ॥ ಅನುಪಲ್ಲ ॥ ಸುರುಚಿರಗಾತ್ರನೆ । ಸರಸಿಜನೇತ್ರನೆ । ಪರಿಪರಿ ಲೀಲೆಯ ತೋರುವನೆ ॥ ಸ್ಮರನುರುಕೇಳಿಯ ಗೈಯುದೆ

ಪೋಪುದು ಸರಿಯೆ ಹರಿಯೆ । ಧೊರೆಯೆ । ಈಪರಿ ॥ ಯೇನಿ ॥ ೧ ॥ ಅಂಗಜನಯ್ಯ ಬೆಳ್ । ದಿಂಗಳ ರಾತ್ರೆಯೊಳ್ । ಸಾಂಗದೊಳೂದಲು ವೇಣುವನೆ ॥ ಭಂಗದಿ ನಿನ್ನಯ । ಸಂಗಡ ಸೇರ್ದೆವು । ಮಂಗಳಾಂಗ ಗಂಗಾಜನಕನೆ ॥ ೨ ॥ ತಾಮರಸಾಕ್ಷನ ರಾಮರ ವಂದ್ಯ ಪಿ । ತಾಮಹತಾತ ರಮಾವರನೆ ಭಾಮೆಯರೆಮ್ಮಯ । ಕಾಮಿತವೀಯೊ ನಿ। ಸ್ಸೀಮ ಶ್ರೀಮ ॥ ಪ್ರೇಮ ಕಾಂತನೆ ॥ ಯೇನಿದೆಮ್ಮನು ॥ ೩ ॥ ಶ್ರೀಃ ॥

೫೫ ರಾಗ ಮುಖಾರಿ, ಆದಿತಾಳ ] [ ದಾಟಿ —ಯೇಸಿರವ್ವಾ ಯಾತಕೆ

ಯಮ್ಮಯ್ಯ ನೀಡಯ್ಯ ಜಗ । ದಯ್ಯ ವಸನವ ಜೀಯ ॥ ಬೇಡುವೆ ಮುಗಿದು ಕಯ್ಯ । ನೀಡುವದೆಮಗಭಯ । ಮಹನೀಯ । ಯದುರಾಯ । ಶುಭಕಾಯ ॥ ಯಮ್ಮಯ್ಯ ॥ ಅನುಪಲ್ಲ ॥ ವಾರೀ ಮಧ್ಯದೊಳಿರುವಿ ಸಾರಿ । ಗುಪ್ತದೊಳಿಲ್ಲಿ ಸಾರಿ । ವಸನವ ಕದ್ದ ಚೋರಿ ॥ ಮದವಿಾರಿ । ಮರವೇರಿ । ಇಹಕ್ರೂರಿ ॥ ಯಮ್ಮಯ್ಯ ನೀಡಯ್ಯ ॥ ೧ ॥ ಮಾನಾವಿಲ್ಲದಿರಲ್ಕೀ ಪ್ರಾಣ । ವಿದ್ದೇನು ಫಲವೈ ಜಾಣ । ಪಶುವಾರಕೆ ಸಮಾನ ॥ ತವಚರಣ । ದ್ವಯಕರುಣ । ಮೃತ ಪಾನಾ । ಯಮ್ಮಯ್ಯ ॥ ೨ ॥ ಸೇರಿದೆವಯ್ಯ ನಿನ್ನ ಕಯ್ಯ । ನೀರೊಳ ಗೇನುಪಾಯ । ನಾರಾಯಣ ಮುಗಿವೆವು ಕಯ್ಯ ॥ ವಸನಿಯ । ವೆಮಗೀಯ । ಲದುನ್ಯಾಯ ॥ ಯೆಮ್ಮಯ್ಯ ॥ ೩ ॥ ಶ್ರೀಃ ॥

೫೬ ರಾಗ ಕಾಂಬೋಧಿ, ರೂಪಕತಾಳ ] [ ದಾಟಿ.—ಸುಖಸಾರದಸುವಿಧಾ

ಮೆರೆಯುವದೈ ಹರಿಮಂದಿರ ಹರಿಮಂದಿರ ಮನಕೇ ಎ ಎ ಎ ಎ ಎ ಎ ಎ ಮೆರೆಯುವದೈ ॥ ಪಲ್ಲ ॥ ಶಿರಿದೇವಿಸೇವೆ ಘನಕೆ । ಉರ ಗೇಂದ್ರಶಯನ ನಿರತ ನುತಿಪ ಜನಕೆ ॥ ಪರಮಾದರದಲಿ ಚತುರ್ವಿಧ ದಲಿ । ಪರಮಸುಖವನೀವ ಅ ಅ ಅ ಅ ಅ ಅ ಅ ॥ ಮೆರೆಯುವದೈ ॥ ॥ ಅನುಪಲ್ಲ ॥ ಶಶಿಸೂರ್ಯ ದ್ವಿನಯನ ಸಿತಭಾಸ । ಬಿಸಜಾದಿ ಸುಮ ವಿಶೇಷ ಪಶುಪತಿ ವಿಧಾತ ಮುಕ್ತಜನರ ಘೋಷ ॥ ಕುಶಲದಿ ನಾರದ ತುಂಬುರರ ಸು । ರಸಗಾನವಿಲಾಸ ॥ ಮೆರೆಯುವದೈ ॥ ೧ ॥ ರವಿಮಂ

ಡಲ ಚುಂಬಿಪ ಗೋಪುರವೊ । ನವರತ್ನಯುತ ಶಿಖರವೋ । ನವಧವಳ ಶಿಲೆಯೊ ಕ್ಷೀರೋದಧಿಯಲೆಯೊ ॥ ಪವಳದ ಪಾವಟಿಗೆಯ ಸರಸಿಯೊ । ಭವರಹಿತರ ಕೆರೆಯೊ ॥ ಮೆರೆ ॥ ೨ ॥ ಪುರವಲಯದಿ ಪರಿಮಳಿಸುವ ಸುಮವಂ । ಮುರಿಯುವ ಸ್ತ್ರೀಯರ ಶ್ರಮವಂ । ಪರಿಹರಿಸಲು ಹರಿ ಗರ್ಜಿಸಿ ಸರಕ್ರಮವಂ । ವಿರಚಿಸಿ ವರರೆದೆಗೆರಡು ಸ್ತನದೊಳಿರಿದು ಕೊರಳಿಗಿರಿಸೆ ॥ ಮೆರೆ ॥ ೩ ॥ ವಿಧಿಮಾರುತ ಶಂಕರನುತಚರಣ । ಮದಯುತ ದಾನವಮಥನಾ । ವಿಧವಿಧದಿ ನೊಂದೆ ನೀಲಮುದಿರ ಕಿರಣಾ ॥ ಪದಕೆರಗಿ ನುತಿಪೆ ಪೊರೆ ಶ್ರೀನಾರಾಯಣ ತವ ಶರಣ ॥ ಮೆರೆಯುವದ್ಯೆ ॥ ೪ ॥ ಶ್ರೀಃ ॥

## ಆರತಿಹಾಡುಗಳು.

೫೭ ರಾಗ ಆನಂದಭೈರವಿ, ಆದಿತಾಳ ] [ ದಾಟಿ —ನೀನೇ ದಯಾಳೊ

ಮಂಗಳಾಂಗಿಯರೆಲ್ಲ । ಮಂಗಳಮಹಿಮಗೆ । ಮಂಗಳಾರತಿ ಯೆತ್ತೀರೆ ॥ ಪಲ್ಲ ॥ ಅಂಗಜನಯ್ಯಗೆ । ಭೃಂಗಕುಂತಳೆ ರಮೆಗೆ । ನುಂಗಿದಾಸಗನನ್ನು । ಭಂಗಿಸಿದಾತಗೆ ॥ ಮಂಗಳಾರತಿಯ ಬೆಳಗೀರೆ ॥ ಶೋಭಾನೆ ॥ ಅನುಪಲ್ಲ ॥ ವೇದವನೊಯ್ದ ವಿ । ರೋಧಿಯ ಮಥಿ ಸುತ್ತ । ಭೂಧರ ಬೆನ್ನೊಳು ಧರಿಸಿದಗೆ ॥ ಆದೇವದಿವಿಜರ ಶೋಧಿಸಿ ಶುಭಕರ । ಆದಿನಾರಾಯಣನೊಲಿಸಿದಾ ಲಕ್ಷ್ಮಿಗೆ ॥ ಮೋದದಾರ ತಿಯಾ । ಬೆಳಗೀರೆ ॥ ೧ ॥ ಧರೆಯನೊಯ್ದನ ಕೊಂದು । ತರಳನ ಪೊರೆದಂದು । ಧರಣಿ ಈರಡಿಮಾಡಿ ಮೆರದವಗೆ ॥ ಕರದೊಳು ಪದು ಮವ । ಧರಿಸಿ ಶ್ರೀಹರಿಪದವ । ನಿರತ ಸೇವಿಸುತಿರುವ । ಸರಸಿರು ಹಾಸನಿಗೆ ॥ ಮರಕತದಾರತಿಯ ॥ ಬೆಳಗೀರೆ ॥ ೨ ॥ ಕ್ಷಿತಿಪರ ಹತ ಗೈದು । ಕ್ಷಿತಿಜೆಯ ವನಕೊಯ್ದು । ರತಿಪತಿಪಿತನಾಗಿ ಮೆರದವಗೆ ॥ ಕ್ಷಿತಿಯೊಳು ಪತಿವ್ರತ ಸತಿವರ ನಿಜವ್ರತ । ಕತಿಮೋದವಡುತ ಸಂತತಿ ಭಾಗ್ಯವೀವ ರಮೆಗೆ ॥ ಮೌಕ್ತಿಕದಾರತಿಯ । ಬೆಳಗೀರೆ ॥ ೩ ॥ ಬುದ್ಧ ನಾಗಿಯೆ ಖಳರ । ಗೆದ್ದು ವಾಜಿಯನೇರಿ । ಶುದ್ಧವಾಗಿಯೆ ಶಾಸ್ತ್ರ । ತಿದ್ದಿದಗೆ ॥ ಮುದ್ದುಮೋರೆಯ ಸತಿಯ । ರಿದ್ದು ಮೌಕ್ತಿಕಾಕ್ಷತೆಯ ।

ಮುದ್ದು ನಾರಾಯಣಗೆ ಪದ್ಮಾಸನಿಗೆ ॥ ತಳಿದು ಪದ್ಮದಾರತಿಯ ॥ ಬೆಳಗೀರೆ ॥ ಶೋಭಾನೆ ॥ ೪ ॥ ಶ್ರೀಃ ॥

೫೮ ರಾಗ ಶಂಕರಾಭರಣ, ಅಟತಾಳ

ನಾರಿಮಣಿಯರಾರತಿಯ । ತೋರಿದರು ॥ ನಾರಿಮಣಿ ॥ ಪಲ್ಲ ॥ ವಾರಿಜದಳಾಕ್ಷನಿಗೆ । ನೀರಜನಿವಾಸಿನಿಗೆ ॥ ನಾರಿಮಣಿ ॥ ಅನುಪಲ್ಲ ॥ ಚಿತ್ರಜನ ಚಿತ್ತದಲಿ । ಪೆತ್ತಾತನ ಕತ್ತಿನಲಿ ॥ ಸುತ್ತ ಹೊಳೆಯುತ್ತಿರುವ । ಮುಕ್ತಸರಯುಕ್ತನಿಗೇ ॥ ೧ ॥ ವಾರಿಯೊಳು ಸೇರಿದಗೆ । ಭಾರಾಗಿರಿ ಧರನಿಗೆ ॥ ಧಾರುಣಿಯ ಧರಿಸಿದ । ನರಹರಿ ಮೂರುತಿಗೆ ॥ ೨ ॥ ವಾಮನಸುನಾಮ । ಭೃಗುರಾಮ ರಘುರಾಮನಿಗೆ ॥ ಕಾಮಪಿತ ಭೀಮನುತ । ಸಾಮಗುಣ ಧಾಮನಿಗೇ ॥ ೩ ॥ ನಾರಿಯರ ಸೇರಿ ಹಯ । ವೇರಿ ಜಯ ತೋರಿದಗೆ ॥ ಈರೈದವತಾರಿ ಸಿರಿ । ನಾರಾಯಣ ಮೂರುತಿಗೆ ॥ ೪ ॥ ಶ್ರೀಃ ॥

೫೯ ರಾಗ ಜಂಜೂಟಿ, ರೂಪಕತಾಳ

ಯದುವರೇಣ್ಯಗೆತ್ತಿರೀಗ । ಕದಳಿಯಾರತಿ । ಸುಮತಿ ॥ ಯದು ॥ ॥ ಪಲ್ಲ ॥ ಪದುಮನಾಭ ಪದುಮಾಸನಿಯ । ಸದಮಲಾಂಗಕೆ । ಮೊಗಕೆ ॥ ಯದು ॥ ಅನುಪಲ್ಲ ॥ ದ್ವಿಮುಖಿಯೊಳು ಕುಂಕುಮದ ಜಲವ । ಕ್ರಮದೊಳಿರಿಸುತ । ಅಸಿತ ॥ ಕಮಲನೇತ್ರ ವಿಮಲಗಾತ್ರ । ರಮಲ ವದನಕೆ । ಶಿರಕೆ ॥ ೧ ॥ ನೊಸಲಿಗಕ್ಷತೆಯನಿರಿಸಿ । ಮಿಸುಪಕುಂಭವ । ಶಿರವ ॥ ಕುಶಲದಿ ನಿವಾಳಿಸುತ ಜಲವ । ರಸಿಗೆ ಚೆಲ್ಲುವ । ಭಾವ ॥ ಯದು ॥ ೨ ॥ ಹಾರಪದಕ ವೈಜಯಂತಿ । ಭೂರಿಸರಗಳ । ಕೊರಳ ॥ ಮೀರಿ ಪೊಳೆವ ಮುಕುಟ ಮೆರವ । ವಾರಿಜಾಕ್ಷಗೆ । ರಮೆಗೆ ॥ ೩ ॥ ಇನಪ್ರಕಾಶಾನನಕೆ ದೋಷ । ಜನಿಸದಂದದಿ । ಮನದಿ ॥ ನೆನದು ನಾರಾಯಣನಪಾರ । ಗುಣವ ಸ್ಮರಿಸುವ । ಕಾವ ॥ ಯದು ॥ ೪ ॥

೬೦ ರಾಗ ಸೌರಾಷ್ಟ್ರ, ಆದಿತಾಳ ] [ ದಾಟಿ—ಮೋಹನರೂಪನ ಚಿಂತಿ

ಅಂಗನೆಯರು ಶ್ರೀರಂಗನಿಗೆತ್ತಿರೆ । ಮಂಗಳಾರತಿ ॥ ಯೆತ್ತಿರೆ ಮಂಗಳಾರತಿ ॥ ಕಾಂಚನ । ಮಂಗಳಾರತಿ ॥ ಬೆಳಗೀರೆ । ಚಂದದಾ

ರತಿ ॥ ಯೆತ್ತಿರೆ । ಮಂಗಳಾರತಿ ॥ ಪಲ್ಲ ॥ ವಾರಿವಿಹಾರಿ । ವರಗಿರಿ ಧಾರಿ । ಚೋರಧರಾರಿವಿದಾರಿ ಹರಿ ॥ ಕ್ರೂರ ಹಿರಣ್ಯಕ । ವೈರಿ ಮುರಾರಿಗೆ ॥ ಮಂಗಳಾರತಿ । ಯೆತ್ತಿರೆ । ಮಂಗಳಾರತಿ ॥ ಅಂಗನೆ ॥ ೧ ॥ ಪೊಡವಿಯ ಬೇಡಿ । ಕೊಡಲಿಯೊಳಾಡಿ । ಮಡದಿಯನೊಯ್ದನ ಮಡುಹಿದಗೆ ॥ ಕಡುಗಲಿ ಕಂಸನ । ಕೆಡಹಿದ ಕೃಷ್ಣಗೆ ॥ ಮಂಗಳಾರತಿ ॥ ೨ ॥ ವಾಸರಹಿತಗೆ । ಶ್ರೀಶ ಕಲ್ಕ್ಯನಿಗೆ । ವಾಸವನುತ ನಾರಾಯಣಗೆ ॥ ತೋಷದಿ ಮೆರವ ಸು । ವಾಸಿನಿಯರು ವರ ॥ ಮಂಗಳಾರತಿ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ಕನ್ನಡ ಸ್ತ್ರೀಪದ್ಯಮಾಲಿಕೆಯ ಮೊದಲನೆಯ ಭಾಗವು

## ಸಂಪೂರ್ಣವು.

॥ ಶ್ರೀಕೃಷ್ಣಾರ್ಪಣಮಸ್ತು ॥



॥ ಶ್ರೀಃ ॥

॥ ಶ್ರೀಲಕ್ಷ್ಮೀನಾರಾಯಣಃ ಪ್ರಸನ್ನಃ ॥

# ಕನ್ನಡ ಸ್ತ್ರೀಪದ್ಯಮಾಲಿಕೆ.

## ಎರಡನೆಯ ಭಾಗವು.

## ಶುಭಶೋಭನದ ಸಭೆಯ ಹಾಡುಗಳು.

### ದಿಬ್ಬಣದ ಕಡೆಯುವರ ಹಾಡು.

೧ ರಾಗ ತೋಡಿ, ಆದಿತಾಳ ] [ ದಾಟಿ —ಬಾರನ್ಯಾತಕೆನ್ನಾ ಸಖಾ

ಬಂದೆವಲ್ಲವೆ ನಾರಿ । ಬಾರೆ ಬ್ಯಾಗನೆ ವೈಯ್ಯಾರಿ ॥ ಬಂಧುಗಳನುಪ । ಚರಿ । ಸಿಂದು ಚಂದದಿ ಸುಂದರಿ ॥ ಬಂದೆವಲ್ಲವೆ ॥ ಪಲ್ಲ ॥ ಭೂರಿವಾದ್ಯಗಳ ಸ್ವಾನಾ । ವಾರನಾರಿಯರಾ ಗಾನಾ ॥ ಚಾರುಭೂಷಣದ ಜನಾ । ವಾರವನ್ನು ನೋಡೀಕ್ಷಣಾ ॥ ೧ ॥ ಹಾಸು ಬಣ್ಣಹಸೆಯನು । ಪೂಸು ದಿವ್ಯಗಂಧವನು ॥ ಸೂಸು ಬೇಗ ಪನ್ನೀರನು । ಬೀಸು ಬೀಸಣಿಗೆಯೊಳಿನ್ನು ॥ ೨ ॥ ಅಂದಣಾವನಿಳಿದನು । ಚಂದಿರಾಸ್ಯನಳೀಯನು ॥ ನಿಂದ ಮಂಟಪದೊಳಿನ್ನು । ತಂದು ನೀಡು ಪಯಾವನು ॥ ೩ ॥ ತಾರತಮ್ಯದಿಂದ ಘನ । ಶ್ರೀರಮೇಶ ನಾರಾಯಣ ॥ ಮೂರುತಿಯ ಭಕ್ತಜನ । ವಾರ ಮನ್ನಿಸೀಗೀಕ್ಷಣ ॥ ಬಂದೆ ॥ ೪ ॥ ಶ್ರೀಃ ॥

### ಮನೆಯುಕಡೆಯುವರ ಹಾಡು.

೨ ರಾಗ ತೋಡಿ, ಆದಿತಾಳ ] [ ದಾಟಿ —ಮೇಲಿನಮಟ್ಟು

ಚಂದವಾದುದವ್ವ ಸಖಿ । ಬಂದುದೀಗ ಚಂದ್ರಾಮುಖಿ ॥ ಕುಂದದೆಮ್ಮ ಮಂದಿರಕೀ । ಗಿಂದು ಬಾರೆ ನೀಲಾಳಕೀ ॥ ಚಂದವಾದುದವ್ವ ॥ ಪಲ್ಲ ॥ ಬಳಲಿ ಬಂದ ಬಾಂಧವರ । ಬಳಗಪಾದಕೆ ತಣ್ಣೀರ ॥

ತಳುವದೀಗಲೆರದು ಶಿರ । ಕೊಲಿದು ತಳೆದೆವು ಪನ್ನೀರ ॥ ೧ ॥ ಕೋಮಲಾಂಗಿ ನೋಡೆ ಸತಿ । ಸ್ತೋಮಗೂಡಿ ಲಾಜಾಕ್ಷತಿ ॥ ಪ್ರೇಮದಿಂದ ತಳಿಯಾಲತಿ । ಸೋಮಜನ್ನವಾಯಿತ್ತೀಕ್ಷಿತಿ ॥ ೨ ॥ ವಾರಸ್ತ್ರೀಯರ ಗೀತವ । ಮಾರುತೀರ್ಪ ಸಂಗೀತವ ॥ ನೀರೆ ನೋಡು ವಾದ್ಯರವ । ತೋರಲಾರೆವೂ ಡಂಬವ ॥ ೩ ॥ ಭೂರಿ ಬೀಗರೆಲ್ಲಾಸನ। ಸೇರಿ ತೋಷಗೊಳ್ಳೀಕ್ಷಣ ॥ ಶ್ರೀರಮೇಶ ನಾರಾಯಣ । ತೋರುವನು ಚಾರುಘೃಣ ॥ ೪ ॥ ಶ್ರೀಃ ॥

## ದಿಬ್ಬಣದ ಕರೆಯುವರ ಹಾಡು.

೩ ರಾಗ ಮಧ್ಯಮಾವತಿ, ಆದಿತಾಳ ] [ ದಾಟಿ—ಸ್ತುತಿಪೆ ಸರಸ್ವತಿಯೇ

ತೋರೆ ಬಿಡಾರ ತರುಣಿ । ಬೇಗದಿ ನಾರೀಮಣಿ ॥ ತೋರೆ ಬಿಡಾರ ತರುಣಿ ॥ ಪಲ್ಲ ॥ ತೋರೆ ಬಿಡಾರವನು । ಬೀರೆ ಸಂತಸಾವನು । ಭೂರಿತಾಪದೀತನು । ಮಾರಿ ಸೋತುದೆಮ್ಮನು ॥ ತೋರೆ ॥ ॥ ಅನುಪಲ್ಲ ॥ ಮಾನವಂತರಸನು । ಮಾನಗಯ್ಯುವುದನು । ಯೋನರಿಯೆಯ ಮತಿ । ಹೀನತೆಯ ಸಂಗತಿ ॥ ತೋರೆ ॥ ೧ ॥ ವೇದಶೋಧಕವರ । ವೈದಿಕ ವಿಪ್ರರ ॥ ಸಾಧುಲೌಕಿಕಾರ್ಯರ । ಭೇದ ಶೋಧನೆಯೊಳು ॥ ತೋರೆ ॥ ೨ ॥ ವೈಶ್ಯಾಗ್ರಗಣ್ಯರ । ವೇಶ್ಯಾಂಗನೆಯರ ॥ ಕೌಶಲ್ಯಕಾರರ । ವಾಸಕೆ ಸುಖಕರ ॥ ತೋರೆ ॥ ೩ ॥ ರಾಯ ನಾರಾಯಣ । ನೋಯದಾತೆರ ಘನ ॥ ಬಾಯ ಡಂಬವ ಬಿಡು । ತೋಯುವ ತಂದುಕೊಡು ॥ ತೋರೆ ॥ ೪ ॥ ಶ್ರೀಃ ॥

## ಮನೆ ಕರೆಯುವರ ಹಾಡು.

೪ ರಾಗ ಮಧ್ಯಮಾವತಿ, ಆದಿತಾಳ ] ದಾಟಿ—ಮೇಲಿನಮಟ್ಟು

ಬಾರೆ ಕಾಮನ ಸತಿಯೆ । ತೋಷದಿ ಬೀಗತಿಯೆ ॥ ಬಾರೆ ॥ ॥ ಪಲ್ಲ ॥ ಬಾರೆ ಕಾಮನ ಸತಿ । ತೋರೆ ಸದ್ಗುಣಾಮತಿ ॥ ಚಾರು ಸುಂದರಸತಿ । ವಾರವ ಕೂಡಿ .ಸಖಿ ॥ ಬಾರೆ ಕಾಮನ ಸತಿಯೆ ॥ ॥ ಅನುಪಲ್ಲ ॥ ಭೂರಿ ಸಂಭ್ರಮದೊಳು । ಸಾರಿ ಬಂದಿದಿರ್ಗೊಳು ॥

ತೂರ ಜನರು ಮಿಗೆ। ತೋರುವ ಸಭೆಗೆ ನೀ ॥ ಬಾರೆ ॥ ೧ ॥ ವಾಸವ ಭವನವ। ದೂಷಿಸಿ ಮೆರೆಯುವ ॥ ಭೂಸುರವರರ ಸಂ। ತೋಷದ ಸಭೆಗೆ ನೀ ॥ ಬಾರೆ ॥ ೨ ॥ ಭಾಸಿಪ ಮಂಟಪದ। ಸೂಸಕ ಬಳಿಗಿದಾ ॥ ಹಾಸಿದ ಹಸೆಗೆ ಸು। ವಾಸಿನಿಯರು ಸಹ ॥ ಬಾರೆ ॥ ೩ ॥ ನ್ಯೂನ ವೇನಿರ್ದರು। ಮಾನಸಕಿಡದಿರು ॥ ಶ್ರೀನಿಧಿ ನಾರಾಯಣ । ತಾನೆ ಪಾಲಿಪ ನಿನ್ನ ॥ ಬಾರೆ ॥ ೪ ॥ ಶ್ರೀಃ ॥

## ದಿಬ್ಬಣದ ಕಡೆಯುವರ ಹಾಡು.

೫ ರಾಗ ಆರಭಿ, ರೂಪಕತಾಳ ] [ ದಾಟಿ —ನೀನೆ ಪೊರೆ ಮಾತೆ ಖ್ಯಾತೆ

ನೋಡೆ ಪ್ರಿಯೆ। ನಮ್ಮ ವಿಭವ। ಮಾಡು ನೀನುಪಚಾರವ ॥ ನೋಡೆ ಪ್ರಿಯೆ ॥ ಪಲ್ಲ ॥ ಮೂಢರಂತೆ ಮಾಡಿ ಕುಳಿತ। ರೋಡಿಪೋಪ ರಲ್ಲ ನಾವು ॥ ನೋಡೆ ಪ್ರಿಯೆ ॥ ಅನುಪಲ್ಲ ॥ ಆನೆ ಕುದುರೆ ಯಾನಗ ಳಲಿ। ಮಾನವಂತರುಗಳು ಬಳಲಿ ॥ ಶಾನೆ ದೇಶಗಳನೆ ತೊಳಲಿ। ಜಾಣೆ ನಿನ್ನ ಮನೆಗೆ ಬಂದೆವು ॥ ನೋಡೆ ॥ ೧ ॥ ಬೇಸರಿಸುತ ಬಂದ ಜನಕೆ। ಆಸೆ ಯೇನೆ ವಾರಿಗುಡಕೆ॥ ಆಸನವನು ಕೊಡದ ಬಗೆಗೆ। ಹೇಸಿ ನಗುವ ರಲ್ಲೆ ಹೀಗೆ ॥ ನೋಡೆ ॥ ೨ ॥ ಚಿಕ್ಕಮಕ್ಕಳುಗಳ ದುಃಖ। ಲೆಖ್ಖಕೆಣಿಸದಿ ರುವೆಯಕ್ಕ ॥ ಬೆಕ್ಕಿನಂತೆ ನಿಲದೆ ಚೊಕ್ಕ। ಸಕ್ಕರೆ ಪಯ ತರಿಸು ಫಕ್ಕ॥ ॥ ೩ ॥ ವನಿತೆಯನ್ನೆ ಕೇಳ್ದ ಕ್ಷಣವೆ। ಕನಕಾಭರಣವೆಷ್ಟೆನ್ನುವೆ ॥ ಇನ ಶಶಿಗಳು ಮನೆಯೊಳಿರುವ। ಘನತೆ ನಿನಗೆ ಸಲುವ ವಿಭವ ॥ ೪ ॥ ನಾರಿ ನಿನ್ನುಪಚಾರವೆಲ್ಲ। ನಾರಾಯಣ ತಾನೆ ಬಲ್ಲ ॥ ನಾರಿಯನ್ನು ಕೊಡು ನಾವೆಲ್ಲ। ಸಾರಿ ಲಗ್ನಗೈವೆವಲ್ಲ ॥ ನೋಡೆ ಪ್ರಿಯೆ ॥ ೫ ॥ ಶ್ರೀಃ ॥

## ಮನೆ ಕಡೆಯುವರ ಹಾಡು.

೬ ರಾಗ ಆರಭಿ, ರೂಪಕತಾಳ ] [ ದಾಟಿ —ಮೇಲಿನಮಟ್ಟು

ನೋಡು ಪ್ರಿಯೆ ಮಾರಜಾಯೆ। ಮಾಡು ಶಾಂತಭಾವ ಸತಿಯೆ॥ ನೋಡು ಪ್ರಿಯೆ ॥ ಪಲ್ಲ ॥ ರೂಢಿಯೊಳಗೆ ಕಾಣೆ ನಿನಗೆ। ಜೋಡು ಗಾರ್ತಿ ಪ್ರೌಢೆಯರಿಗೆ ॥ ನೋಡು ಪ್ರಿಯೆ ॥ ಅನುಪಲ್ಲ ॥ ಶಾನೆ ವಾಜಿ

ಯಾನೆಸೇನೆ। ಕಾಣೆಯೇನೆ ಸಟೆಯಿದೇನೆ॥ ಮೌನವನ್ನೆ ತಾಳಿ ನಾನು। ಕ್ಷೋಣಿಯೊಳಗೆ ಜಾಣೆ ನೀನು॥ ನೋಡು ॥ ೧॥ ಬಿಸಿಲ ಝಳಕೆ ಬಂದಿರೆಂದು। ಕುಶಲದಿಂದ ಹಾಲು ತಂದು॥ ಪಸುಳೆಯರಿಗೆ ಕೊಡಲು ತಾನೆ। ಬಸುರಿಗೆರೆದುಕೊಂಡೆ ನೀನೆ॥ ನೋಡು॥ ೨॥ ಪೊಳೆವ ಮಂಟಪದೊಳಗಿರ್ಪ। ಥಳಿಗದಿರನ ತೆರದಿ ತೋರ್ಪ॥ ತಿಳಿಗನ್ನಡಿ ವೆಳಗ ನೋಡಿ। ಕಳವಳದೊಳಗಾಡುತಿರ್ಪೆ ॥ ೩ ॥ ಭೇದಶೋಧದಿಂದೆಲ್ಲರ। ಮೋದದಿಂ ಸತ್ಕರಿಸಲವರ॥ ಶ್ರೀಧರೇಶ ನಾರಾಯಣ। ಪಾದಗೈದ ಡೊಲ್ಲ ಕರುಣಾ॥ ೪॥ ಶ್ರೀಃ॥

## ದಿಬ್ಬಣದ ಕಡೆಯುವರ ಹಾಡು.

೭ ರಾಗ ಯರಕಲಕಾಂಬೋಧಿ, ರೂಪಕತಾಳ

ಸಾಕೆ ನಿಮ್ಮ ಸಕಲ ಧರ್ಮ। ಶೋಕರಸದ ನುಡಿಯ ಮರ್ಮ॥ ಸಾಕು ನಿಮ್ಮ ॥ ಪಲ್ಲ॥ ಮೂಕರಂತೆ ನಿಂತಡೆಮ್ಮ। ಸೂಕಿಸುವಿರಿ ನಿಜವಿದಮುವು॥ ಸಾಕೆ ನಿಮ್ಮ ॥ ಅನುಪಲ್ಲ॥ ಕರವನೆಡದ ಕಟಿಯ ಮ್ಯಾಲೆ। ಭರದೊಳಿಟ್ಟು ಝುರಿಯುಶ್ಯಾಲೆ॥ ನೆರಿಯ ಪಿಡಿದು ಕೊರಳ ಮಾಲೆ। ನಿರುಕಿಸುತಲೆ ಸರಿವೆ ಬಾಲೆ॥ ಸಾಕೆ ನಿಮ್ಮ ॥ ೧॥ ಒರೆವುದೇನು ಮೆರವ ಭಾನು। ಕಿರಣ ಗ್ರಹದೊಳಿರುವದಿನ್ನು॥ ವರವೆ ಸಟೆಯ ಸಂಭ್ರಮವನು। ಸರಿಯ ಬಂಧುವಲ್ಲ ನೀನು॥ ಸಾಕೆ॥ ೨॥ ಕನಕವಸನ ಧನವಾಭರಣ। ಯೆಣಿಸಲದುವೆ ತೃಣಸಮಾನ॥ ವನಿತೆಯರಿಗೆ ನೀತಿಮಾನ। ಗುಣಗಳೆ ನಿಜ ತನುವಿಭೂಷಣ॥ ಸಾಕೆ॥ ೩॥ ಸತಿಯೆ ನಿನ್ನ ಮತಿಯು ಹೀನ। ಸ್ಥಿತಿಯು ಮಾನವತಿಯರನ್ನ॥ ಹಿತದಿ ಮನ್ನಿಸಲ್ಕೆ ಮದನ। ಪಿತನೆ ಪೊರೆವ ಶ್ರೀನಾರಾಯಣ॥ ಸಾಕೆ॥ ೪॥ ಶ್ರೀಃ॥

## ಮನೆ ಕಡೆಯುವರ ಹಾಡು.

೮ ರಾಗ ಯರಕಲಕಾಂಬೋಧಿ, ರೂಪಕತಾಳ

ಯಾಕಿದೆಮ್ಮ। ಜರಿವಿರಮ್ಮ। ಕಾಕುವಾಕು ನಿಲಿಸಿ ನಿಮ್ಮ॥ ಸಾಕು ಸೋತೆವೀಗ ಬೊಮ್ಮ। ಶೋಕಕೀಡಗಯ್ದನಮುವು॥ ಯಾಕಿ

ದೆಮ್ಮ ॥ ಪಲ್ಲ ॥ ಸುರಪಸಭೆಯ ಪೋಲ್ವ ಶಿರಿಯ । ಭರದಿ ಕಂಡು ಸೈಸದಿಹೆಯ ॥ ಬರಲು ವಾರಿಸಕ್ಕರೆ ಪಯ । ತರಿಸಿಕೊಟ್ಟ ಪರಿ ಮರ ತೆಯ ॥ ಯಾಕಿದೆಮ್ಮ ॥ ೧ ॥ ಸೂರ್ಯಸೋಮರಂತ ಪ್ರಭೆಯ । ಚಾರುದೀವಿಗೆಗಳ ನಿಚಯ ॥ ಮಿಾರಿ ತೋರೆ ನಿಮ್ಮ ಸಿರಿಯ । ನೀರೆ ಮತ್ಸರದಿ ಜರಿವೆಯ ॥ ೨ ॥ ಮಾನವಂತರೆಂದು ನಿಮಗೆ । ಮಾನ ನಿಯ ಕೊಡಲು ಹೀಗೆ ॥ ಮಾನವನ್ನು ಕಳೆವ ಬಗೆಗೆ । ಜಾಣೆ ಯತ್ನ ಗೈವೆ ಕಡೆಗೆ ॥ ೩ ॥ ಊರಜನರು ನೆರದು ಗೈದ । ಸಾರವಾದುಪ ಚಾರ ಮೋದ ॥ ನಾರಾಯಣ ಬಲ್ಲ ತಾನಿದ । ನೀರೆ ಸಾಕು ನಿಮ್ಮ ವಾದ ॥ ಯಾಕಿದೆಮ್ಮ ॥ ೪ ॥ ಶ್ರೀಃ ॥

## ದಿಬ್ಬಣದ ಕಡೆಯುವರ ಹಾಡು.

೯ ರಾಗ ಬೇಗಡೆ, ರೂಪಕತಾಳ.] [ದಾಟಿ—ತನವಾರಿತಾ ನಾಮೂಲೆ ದಃಯಾ

ಬಾರೆ ಬಾ ಸಖಿ । ಸಾರಸಮುಖಿ ॥ ಬಾರೆ ಬಾ ಸಖಿ ॥ ಪಲ್ಲ ॥ ಮೋರೆದೋರದೆ ಸಾರಿ ಪೋಗುವುದೆ ॥ ಬಾರೆ ಬಾ ಸಖಿ ॥ ಅನುಪಲ್ಲ ॥ ಸುತ್ತಿಬಂದು ಬಾಯಾ । ರಿತ್ತು ಕಾಣೆ ತೋಯ ॥ ವಿತ್ತೆನೆಂದು ಬಾಯ । ನೊತ್ತಿನುಡಿಯುವೇಯ ॥ ಬಾರೆ ॥ ೧ ॥ ಬಂದ ಬಾಂಧವರ । ನಿಂದಿಸಿ ತನ್ನವರ ॥ ಚಂದದಿಂದುಪಚಾರ । ದಿಂದಲಿರ್ಪೆ ದೂರ ॥ ಬಾರೆ ॥ ೨ ॥ ಪುಷ್ಪ ವೀಳ್ಯ ಗಂಧ । ಚಪ್ಪರದೊಳೊಂದ ॥ ಇಪ್ಪ ದನು ಕಾಣೆ । ಸರ್ಪಶಾಯಿಯಾಣೆ ॥ ೩ ॥ ಮಾನಕೆ ಸರಿಯಾಗೆ । ಮನ್ನಿಸದೆ ಪೋಗೆ ॥ ಶ್ರೀನಾರಾಯಣನಿಗೆ । ನ್ಯೂನವೇನು ಸೊಬಗೆ ॥ ಬಾರೆ ॥ ೪ ॥ ಶ್ರೀಃ ॥

## ಮನೆ ಕಡೆಯುವರ ಹಾಡು.

೧೦ ರಾಗ ಬೇಗಡೆ, ರೂಪಕತಾಳ ] [ದಾಟಿ—ಮೇಲಿನಮಟ್ಟು

ಯೇನಿದು ಸಖಿ । ವನಜಮುಖಿ ॥ ಯೇನಿದು ಸಖಿ ॥ ಪಲ್ಲ ॥ ಮಾನವಿಲ್ಲದೆ ಮಾತನಾಡುವುದೆ ॥ ಯೇನಿದು ಸಖಿ ॥ ಅನುಪಲ್ಲ ॥ ಬಂದ ದಿಬ್ಬಣಿಗ । ರಂದ ನೋಡಿ ಬೇಗ ॥ ತಂದು ಬೀಸಣಿಗೆಗ । ಳಿಂದ ಬೀಸಲೀಗ ॥ ೧ ॥ ವಾರಿಸಕ್ಕರೆಯ । ಭೂರಿ ಫಲ ಖಜ್ಜಾಯ ॥ ಮಿಾರಿ

ತಿಂದು ಬಾಯ । ತೋರಿ ದೂರುವೆಯ ॥ ೨ ॥ ಗಂಧ ಪುಷ್ಪ ವೀಳ್ಯ । ಚಂದ್ರ ಕಸ್ತೂರಿಯ ॥ ಚಂದದಿಂದಲೀಯಾ । ಲೊಂದನು ಕಾಣೆಯ ॥ ॥ ೩ ॥ ತಳಿದೆವು ಪನ್ನೀರ । ಮಳೆಯಂತೆಯಪಾರ ॥ ತಿಳಿವನು ಶ್ರೀನಾರಾ । ಯಣನೀಯುಪಚಾರ ॥ ಯೇನಿದು ಸಖಿ । ವನಜ ಮುಖಿ ॥ ಯೇನಿದು ಸಖಿ ॥ ೪ ॥ ಶ್ರೀಃ ॥

## ದಿಬ್ಬಣದ ಕಡೆಯುವರ ಹಾಡು.

೧೧ ರಾಗ ಆನಂದಭೈರವಿ, ಅಟತಾಳ ] [ ದಾಟಿ —ಯೇನು ಪಥ ನಮಗೇ

ಬಾರೆ ಬಾ ರಮಣಿ । ಮಾರನರಗಿಣಿ ಬಾ ॥ ಮಾರನರಗಿಣಿ ಬಾರೆ ಬಾ ರಮಣಿ ॥ ಪಲ್ಲ ॥ ಬಾ ರಮಣಿ । ನಾರಿಮಣಿ । ನಿಷ್ಕರುಣಿ । ಪನ್ನಗವೇಣಿ ॥ ಬಾರೆ ಬಾ ರಮಣಿ ॥ ಅನುಪಲ್ಲ ॥ ಸುಂದರಿ ಕೇಳ್ ನಿನ್ನ । ಮಂದಿರಕಾಗಿ ನಾ ॥ ಬಂಧು ಬಾಂಧವರನ್ನ । ತಂದು ಪೊಂದಿದೆ ಬನ್ನ ॥ ಬಾರೆ ಬಾ ರಮಣಿ ॥ ೧ ॥ ಅಕ್ಕರಿಲ್ಲದ ಊಟ । ಸೊಕ್ಕಿದ ಸತಿಯಾಟ ॥ ಮಿಕ್ಕಿಮೀರಿದ ಬಂಟ । ಲೆಕ್ಕಿಸೆ ಬಂಡಾಟ ॥ ಬಾರೆ ॥ ॥ ೨ ॥ ನಿತ್ಯವಲ್ಲೀ ಕಾಯ । ಮಿಥ್ಯವಲ್ಲವೆ ಭಾಗ್ಯ ॥ ಸತ್ಯ ಸದ್ಗುಣ ವಾಕ್ಯ । ಕೃತ್ಯಕೀರ್ತಿಗೆ ಮುಖ್ಯ ॥ ಬಾರೆ ॥ ೩ ॥ ಅತಿಥಿ ಪೂಜೆಗೆ ನೋವ । ಸತಿಗೆ ದುರ್ಗತಿ ಸಾವು ॥ ಮತಿವಂತೆಯರಿಗೆ ಶಾ । ಶ್ವತ ನಾರಾ ಯಣಧಾಮ ॥ ಬಾರೆ ॥ ೪ ॥ ಶ್ರೀಃ ॥

## ಮನೆ ಕಡೆಯುವರ ಹಾಡು.

೧೨ ರಾಗ ಆನಂದಭೈರವಿ, ಅಟತಾಳ ] [ ದಾಟಿ —ಮೇಲಿನಮಟ್ಟು

ದೂರದಿರು ಸತಿಯೆ । ಕಾಮನಜಾಯೆ ॥ ದೂರದಿರು ಸತಿಯೆ ॥ ॥ ಪಲ್ಲ ॥ ನೀ ಸತಿಯೆ । ದುರ್ಮತಿಯೆ । ಸಾರಥಿಯೆ । ದುರ್ಗತಿಪ್ರಿಯೆ ॥ ದೂರದಿರು ಸತಿಯೆ ॥ ಅನುಪಲ್ಲ ॥ ಮಂದಗಮನೆ ನಿನ್ನ । ಬಂಧು ಬಾಂಧವರನ್ನ ॥ ಕುಂದಿಲ್ಲದಂತೆ ನಾ । ನಿಂದು ಸತ್ಕರಿಸಿದೆ ॥ ದೂರ ದಿರು ॥ ೧ ॥ ಸತತವೀ ಗೃಹದೊಳು । ಅತಿಥಿಗಳಯ್ದಲು ॥ ಹಿತದಿ ಮನ್ನಿಪ ರೊಳು । ಮತಿಹೀನ ನುಡಿಯೊಳು ॥ ೨ ॥ ಅಕ್ಕರಿಂದಲೆ ಪಯ । ಸಕ್ಕರೆ ಬಾಳೆಯ ॥ ಚೊಕ್ಕ ಹಣ್ಣುಗಳೀಯ । ಲಿಕ್ಕಲಿಲ್ಲೆನುವೆಯ ॥ ೩ ॥

ತೋಯಜಾಕ್ಷಿಯೆ ನಿನ್ನ । ಬಾಯ ಪೌರುಷವೆನ್ನ ॥ ನೋಯಿಸುವುದು ಶ್ರೀನಾ । ರಾಯಣನೊಲಿವನೆ ॥ ದೂರದಿರು ಸತಿಯೆ ॥ ೪ ॥ ಶ್ರೀಃ ॥

## ಊಟದ ಸಮಯದ ಹಾಡುಗಳು.

### ದಿಬ್ಬಣದ ಕಡೆಯುವರ ಹಾಡು.

೧೩ ರಾಗ ಚಾಲ್, ಆದಿತಾಳ ] [ ದಾಟಿ —ವಡಿವೇಲನೀಕಾರಯಾ

ಸರಸಿರುಹನೇತ್ರೆಯೆ । ತೋರಿಸೆಮಗೆಡೆ ನಾರಿಮಣಿ ॥ ಸರ । ಸಿರುಹನೇತ್ರೆಯೆ ॥ ಪಲ್ಲ ॥ ಊರವರ । ನುಪಚರಿಸಿ ॥ ತೋರಣದ ಬಳಿ । ತೋರಿಸಿದೆ ॥ ಸರ । ಸಿರುಹ ॥ ೧ ॥ ಖಂಡಿಸುತೆ । ವ್ಯಮ್ಮಯ ಮನ ॥ ತುಂಡೆಲೆಯೆ ಸಂ । ಮಾನಸರಿ ॥ ಸರ । ಸಿರುಹ ॥ ೨ ॥ ವಾರಿಯ ನೀ । ತೋರಿಸದೆ ॥ ವಾರೆನೋಟದಿ । ಸಾರುವುದೆ ॥ ಸರ । ಸಿರುಹ ॥ ೩ ॥ ನಾರಾಯಣಾ । ತ್ಮಜಬರಹ ॥ ಕ್ರೂರರಾದ । ನೆಂಟರಹ ॥ ಸರ । ಸಿರುಹ ॥ ೪ ॥ ಶ್ರೀಃ ॥

### ಮನೆಯ ಕಡೆಯುವರ ಹಾಡು.

೧೪ ರಾಗ ಚಾಲ್, ಆದಿತಾಳ ] [ ದಾಟಿ — ಮೇಲಿನಮಟ್ಟು

ಬರಿದೇತಕೆಮ್ಮ ದೂರುವೆ । ಮಾತಿನೊಳು ಬಲು । ಮತ್ಸರವೆ ॥ ಬರಿದೇತಕೆಮ್ಮ ದೂರುವೆ ॥ ಪಲ್ಲ ॥ ನಡುಸಭೆಯೊಳ್ । ಕೊಡಿಯೆ ಲೆಯ ॥ ನೀಡಿ ಕುಳಿಸಲು । ಕಾಡುವೆಯ ॥ ಬರಿ । ದೇತಕೆಮ್ಮ ದೂರುವೆ ॥ ೧ ॥ ತೋಯದ ತಂ । ಬಿಗೆಗಳನು ॥ ತೋಯಜಾಕ್ಷಿಯೆ । ನೋಡಿದನು ॥ ಬರಿ ॥ ೨ ॥ ಬಂಧುಗಳ । ಕುಂದುಗಳ ॥ ಮಂದಮತಿಯೊಳು । ಶೋಧಿಸುವೆ ॥ ಬರಿ ॥ ೩ ॥ ಶ್ರೀವರ ನಾ । ರಾಯಣನೆ ॥ ಈ ವಿವರಗಳ । ನರಿಯದಿಹನೆ ॥ ಬರಿದೇತಕೆಮ್ಮ ದೂರುವೆ ॥ ೪ ॥

### ದಿಬ್ಬಣದ ಕಡೆಯುವರ ಹಾಡು.

೧೫ ರಾಗ ಮುಖಾರಿ, ಆದಿತಾಳ ] [ ದಾಟಿ —ಪೇಳುವೇನೀಗ ಮಮತಾತನೆ

ಸರಸಿಜನಯನೆ ಸಖಿ । ಥರವೆ ಚಂದಿರಮುಖಿ ॥ ಸರ । ಸಿಜ ॥ ಪಲ್ಲ ॥ ಮಾತನಾಡಲು ಬಲು । ಖಾತಿಯ ಮಾಡುವೆ ॥

ನೀತಿಯೆ ನಿನಗೀ । ರೀತಿ ಪ್ರಸ್ತವು ॥ ಸರ ॥ ೧ ॥ ಅನ್ನವ ನೋಡೆ ಚಿ । ತ್ರಾನ್ನವ ಪೋಲ್ವದು ॥ ಕಣ್ಣೊಳು ಕಾಣೆವು । ಎಣ್ಣೆ ಘೃತವು ॥ ಸರ ॥ ॥ ೨ ॥ ಅಡಿಗೆಯ ಬಲ್ಲವ । ಪೊಡವಿಯೊಳಿಲ್ಲವೆ ॥ ವಡಲಿಗೆ ಜಡಪಡಿ । ಸುವ ಶಾಕವೆ ॥ ೩ ॥ ಯೆಲೆಯೊಳಗಿಕ್ಕಿದ । ಹುಳಿತಾಳು ನೋಡಿದ ॥ ಮಲೆಯಾಳದ ಮಳ । ಭಕ್ಷ್ಯದಹದಾ ॥ ೪ ॥ ಶ್ರೀಪನಾರಾಯಣ । ನೀ ಪರಿ ಭೋಜನ ॥ ತಾಪದಿ ತಾ ಪೊರೆವನೊ । ಮರೆವನೊ ॥ ಸರಸಿಜ ನಯನೆ ಸಖಿ ॥ ೫ ॥ ಶ್ರೀಃ ॥

## ಮನೆ ಕಡೆಯುವರ ಹಾಡು.

೧೭ ರಾಗ ಮುಖಾರಿ, ಆದಿತಾಳ ] [ ದಾಟಿ —ಮೇಲಿನಮಟ್ಟು

ಸ್ಮರನರ । ಗಿಣಿಯೆ ಪ್ರಿಯೆ ॥ ಸರಿಯೆ । ಕರಿಯಾನೆಯೆ ॥ ಸ್ಮರನರ ॥ ಪಲ್ಲ ॥ ಬರಿದೆಮ್ಮ ದೂರುವ । ಪರಿಯನೀಗಿರುವವ ॥ ರರಿಯುವದಿಲ್ಲವೆ । ಜರಿವೆ ಧರವೆ ॥ ಸ್ಮರನರ ॥ ೧ ॥ ಶಾಕವ ಬಡಿಸಿದ । ಪಾಕವ ಗೈದಹದ ॥ ವೇಕೆ ರುಚಿಯರಿಯೆ । ಸೋಕಿತೆ ಜ್ವರ ॥ ಸ್ಮರ ॥ ೨ ॥ ತಿಂದು ದೂರುವ ಪರಿ । ಯೊಂದರಿವೆ ನೀ ಸರಿ ॥ ಯೊಂದು ಪ್ರಸ್ತವ ಗೈ । ದವಳಲ್ಲವು ॥ ೩ ॥ ಮಾನಸ ವಂಚಿಸಿ । ಹೀನಿಸಿ ನುಡಿದರೆ ॥ ಶ್ರೀನಾರಾಯಣ । ತಾನೊಲಿವನೆ ॥ ಸ್ಮರನರ ಗಿಣಿಯೆ ಪ್ರಿಯೆ ॥ ೪ ॥ ಶ್ರೀಃ ॥

## ದಿಬ್ಬಣದ ಕಡೆಯುವರ ಹಾಡು.

೧೮ ರಾಗ ಪೀಲು, ಆದಿತಾಳ ] [ ದಾಟಿ —ಸರಸೀರುಹಾಂಬಕಿ ನಿನ್ನಾ

ಯಾತಕಿಲ್ಲಿಗೆ ಬಂದೆವೀಗ । ಸಾಕು ಸೋತುಹೋದೆವು ಹಿಂದೆ । ತೆರಳುಪ ಬೇಗ ॥ ಯಾತಕಿಲ್ಲಿಗೆ ॥ ಪಲ್ಲ ॥ ಬಡವರೆಂದೊರೆಯದೆ । ಪುಡಿಪ್ರಸ್ತಗಯ್ಯದೆ ॥ ಎಡೆಯೊಳು ಬಡಿಸದೆ । ಕಡುಬಾಧೆಗೊಳಿಸಿದೆ ॥ ॥ ೧ ॥ ಸಾರಾದರೊಂದಿಷ್ಟು । ತೋರಿಸೆಮಗೆ ಕೆಟ್ಟು ॥ ನಾರುವ ಹುಳಿಯಿಷ್ಟು । ಸೇರದು ಮತಿಗೆಟ್ಟು ॥ ೨ ॥ ಚಪ್ಪೆಹೋಳಿಗೆ ಜಡ್ಡು । ತುಪ್ಪಕಾದರು ಜೋಡು ॥ ವಪ್ಪದೆಣ್ಣೆಯಲಾಡು । ಹಪ್ಪಳಕಿಲ್ಲೀಡು ॥

॥ ೩ ॥ ಊರನೆಂಟರನೆಲ್ಲ । ಸೇರಿಬಂದಿಹೆವಲ್ಲ ॥ ಊರಸೇರುವದೆಲ್ಲ । ನಾರಾಯಣನೆ ಬಲ್ಲ ॥ ಯಾತಕಿಲ್ಲಿಗೆ ಬಂದೆವೀಗ ॥ ೪ ॥ ಶ್ರೀಃ ॥

## ಮನೆ ಕಡೆಯುವರ ಹಾಡು.

೧೮ ರಾಗ ಪೀಲು, ಆದಿತಾಳ ] [ ದಾಟಿ—ಮೇಲಿನಮಟ್ಟು

ಚಂದವಾದುದು ನಮ್ಮ ಯೋಗ । ನವ । ಬಂಧುಗಳಿಂದ ಸಂದುದು ಮಾನವೀಗ ॥ ಚಂದವಾದುದು ॥ ಪಲ್ಲ ॥ ಮಂದಮತಿಗಳಿವ । ರಂದವನರಿಯದೆ ॥ ಕುಂದರರದನೆಯನ್ನು । ಕೊಂದೆವು ನಾವಿನ್ನು ॥ ಚಂದ ॥ ೧ ॥ ಯೆಷ್ಟುಪಚರಿಸಲು । ನಿಷ್ಟೂರ ನುಡಿವಳು ॥ ಭ್ರಷ್ಟಬಾಂಧವರೊಳು । ಕಷ್ಟಬಂತೀಗಲು ॥ ೨ ॥ ಕಡುಬು ಹೋಳಿಗೆ ತುಪ್ಪ । ಒಡನೆ ಜಿಲುಬಿಯಪ್ಪ ॥ ಒಡಲ ತುಂಬಿಸಿ ದರ್ಪ । ಬಿಡದೆ ದೂರುವಿರಪ್ಪ ॥ ೩ ॥ ಹುಳಿಸಾರು ಪರಮಾನ್ನ । ಮೆಲುತ ಬಾಳೆಯಹಣ್ಣ ॥ ಉಳಿವುದೆಂತೀ ಪ್ರಾಣ । ತಿಳಿವ ನಾರಾಯಣ ॥ ಚಂದ ॥ ೪ ॥ ಶ್ರೀಃ ॥

## ದಿಬ್ಬಣದ ಕಡೆಯುವರ ಹಾಡು.

೧೯ ರಾಗ , ಆದಿತಾಳ ] [ ದಾಟಿ —ಥರವಲ್ಲಾ ಇದೂ ನೀತೀ

ಸರಸಿಜಮುಖಿ ನಾರಿ । ಸರಿಯೇನೆ ಸುಂದರಿ ಇ ಇ ಇ ಇ ಇ ॥ ಸರಸಿಜ ॥ ಪಲ್ಲ ॥ ಬರಿದೆ ಮಾನಿತರನ್ನು ಕರೆದು ತಂದೆವಾದಿನ್ನು ॥ ವರೆದು ಫಲಗಳೇನು । ಪರಿಹಾಸದಿರವನು । ಉ ಉ ಉ ಉ ಉ ॥ ಸರಸಿಜ ॥ ೧ ॥ ಗಾಂಭೀರ್ಯವನು ನೋಡೆ । ಅಂಬುಧಿ ನಿನಗೀಡೆ ॥ ನಂಬುವ ನುಡಿಯಾಡೆ । ಡಂಬವ ನೀ ಬಿಡೇ ಎ ಎ ಎ ಎ ಎ ॥ ಸರಸಿಜ ॥ ೨ ॥ ನೀರನೀಯುವರಿಲ್ಲ । ಆರಾಧಿಸಿದುದೆಲ್ಲ ॥ ನಾರಾಯಣನು ವಲ್ಲ । ನೀರೆಯೆ ನಿಷ್ಫಲ ಅ ಅ ಅ ಅ ಅ ॥ ಸರಸಿಜ ॥ ೩ ॥

## ಮನೆ ಕಡೆಯುವರ ಹಾಡು.

೨೦ ರಾಗ ಆದಿತಾಳ ] [ ದಾಟಿ—ಮೇಲಿನಮಟ್ಟು

ಥರವೇನೆ ಮದದಾನೆ । ಜರೆಯುವ ಭಾವನೇ ಎ ಎ ಎ ಎ ಎ ॥ ಥರವೇನೆ ॥ ಪಲ್ಲ ॥ ಬಂದ ಬೀಗರಿಗೆಲ್ಲ । ತಂದಿತ್ತೆ ನೊರೆಹಾಲ ॥

ಮುಂದಿಗೆ ಜಲವಿಲ್ಲ । ವೆಂದು ದೂರಿದೆ ಛಲ ಆ ಆ ಆ ಆ ಆ ॥ ಧರವೇನೆ ॥ ೧ ॥ ಮಡಿಯನುಡದೆ ಪೋಗಿ । ಯೆಡೆಯೊಳ್ಕುಳಿತೆ ಸಾಗಿ ॥ ನುಡಿಯುವೆ ಸಟೆಯಾಗಿ । ಪಡೆ ತೋಯ ತಂಬಿಗೀ ಇ ಇ ಇ ಇ ಇ ॥ ಧರವೇನೆ ॥ ೨ ॥ ಸಾರವಾಗಿಹ ಸೂಪ । ಕ್ಷೀರ ಪಾಯಸಪೂಪ ॥ ಮೀರಿ ಮೆದ್ದರು ತೋರ್ಪ । ನಾರಾಯಣನು ಕೃಪ ಅ ಅ ಅ ಅ ಅ ॥ ಧರವೇನೆ ॥ ೩ ॥ ಶ್ರೀಃ ॥

## ದಿಬ್ಬಣದ ಕಡೆಯುವರ ಹಾಡು.

೨೧ ರಾಗ ಕೆಮಾಚ್, ಅಟತಾಳ ] [ ದಾಟಿ — ಮಾತಾಡಾಬಾರದೇನೋ

ಸಾಕು ನಿನ್ನಯ ಸಂಗತಿ । ಡಾಂಭಿಕ ಪ್ರೀತಿ ॥ ಸಾಕು ॥ ಪಲ್ಲ ॥ ಸಾಕೆ ನಿನ್ನಯ ರೀತಿ । ಮೂಕರಂದದಿ ಮಾತಿ । ಗೇಕೆ ನುಡಿಯೆ ಪ್ರತಿ । ಶೋಕವೇನಿದು ಸತಿ ॥ ಸಾಕೆ ನಿನ್ನಯ ಸಂಗತಿ ॥ ಅನುಪಲ್ಲ ॥ ಬಾಯಾರಲೊಂದಿಷ್ಟು । ತೋಯ ಬೇಡಲು ಶಿಟ್ಟು ॥ ಪ್ರೀಯ ನೋಳೇನಿಷ್ಟು । ನ್ಯಾಯವು ಮತಿಗೆಟ್ಟು ॥ ಸಾಕು ॥ ೧ ॥ ಬಾಲ ರುಣ್ಣಿರು ದಿವ್ಯ । ಹಾಲನೀಯದೆ ಕಯ್ಯ ॥ ಶಾಲೆಯ ನೆರಿಗೆಯ । ಮೇಲೆತ್ತಿ ನಡವೆಯ ॥ ೨ ॥ ಏನ ಪೇಳಲಿ ನಾನು । ಹೀನಬಂಧು ಗಳನ್ನು ॥ ಶ್ರೀನಾರಾಯಣನಿನ್ನು । ತಾನೆ ಜೋಡಿಸಿದನು ॥ ಸಾಕು ನಿನ್ನಯ ಸಂಗತಿ ॥ ೩ ॥ ಶ್ರೀಃ ॥

## ಮನೆ ಕಡೆಯುವರ ಹಾಡು.

೨೨ ರಾಗ ಕೆಮಾಚ್, ಅಟತಾಳ ] [ ದಾಟಿ—ಮೇಲಿನಮಟ್ಟು

ಯಾಕೆ ದೂರುವೆ ಬೀಗಿತಿ । ಸಾಕಿದು ಖಾತಿ ॥ ಯಾಕೆ । ದೂರುವ ಬೀಗಿತಿ ॥ ಪಲ್ಲ ॥ ಯಾಕೆ ದೂರುವೆ ಸತಿ । ಕಾಕುಜನರ ಸ್ಥಿತಿ ॥ ಲೋಕದೊಳಪಖ್ಯಾತಿ । ನೀ ಕೇಳೆ ಸನ್ಮತಿ ॥ ಯಾಕೆ ॥ ಅನುಪಲ್ಲ ॥ ನೀತಿಬೋಧನೆಯೊಳು । ಸೀತೆಯಂತೀರ್ಪಳು ॥ ರೀತಿಯ ನೋಡಲು । ಧೂರ್ತೆ ಚಂಡಿಯ ಪೋಲು ॥ ಯಾಕೆ ॥ ೧ ॥ ಫಣೆಗೆ ಹಯವನಿತ್ತ । ಡೆಣಿ ಪುದೆ ಗುಣ ಮತ್ತ ॥ ಜನಕುಪಚರಿಸುತ್ತ । ಮನಮೆಚ್ಚಿಪನೆ ಧಾತ ॥

॥ ೨ ॥ ಹಾಡಿಸೊಳಧಿಕ ಸು। ಫ್ರೌಢೆಯನ್ನುತಲೀಸು ॥ ಮೋಡಿಯ ನುಡಿಗಳ। ಸಾಡುವೆಯ ಭಲ ॥ ೩ ॥ ದೋಷವೆಣಿಸಿ ಗುಣ। ರಾಶಿಯ ಮರದೆನ್ನ ॥ ದೂಷಿಸೆ ಕ್ಷಮಿಸನಾ। ಶ್ರೀಶ ನಾರಾಯಣ ॥ ೪ ॥ ಶ್ರೀಃ ॥

## ದಿಬ್ಬಣದ ಕಡೆಯುವರ ಹಾಡು.

೨೩ ರಾಗ ಬೇಹಾಗ್, ಆದಿತಾಳ ] [ ದಾಟಿ — ದಾಸಾನೆನಿಸೋ ಯನ್ನ

ಸರಸಿಜಮುಖಿ ಸಖಿ। ಇದು। ಥರವೆ ಚಂದಿರಾಮುಖಿ ॥ ಇದು। ಥರವೆ ಚಂದಿರಾಮುಖಿ। ಇದು। ಸರಿಯೆ ಸಾರಸಮುಖಿ ॥ ಪಲ್ಲ ॥ ಸಾಕಮ್ಮ ಸಮ್ಮಾನವು। ನಿಸ। ಗೇಕಿಂತು ದುಮ್ಮಾನವು ॥ ಶಾಕಾಪಾಕಂಗಳು। ಸೋಕಲಿಲ್ಲೆಡೆಯೊಳು। ಬೇಕೆನ್ನದನ್ನವ। ಹಾಕುವದೇನವ್ವ ॥ ಸರಸಿಜ ॥ ೧ ॥ ತೋವೆ ಸಾಸಿವೆಗಳು। ಸವಿ। ಮಾವಿನಕಾಯಾಹೋಳು ॥ ಭಾವಿಸಲೆಡೆಯೊಳ। ಗಾವ ವಸ್ತುಗಳಿಲ್ಲ। ಭಾವಕೆಬಾಂಧವ। ಭಾವ ನಿನ್ನೊಳಗಿಲ್ಲ ॥ ಸರ ॥ ೨ ॥ ಯೆಣ್ಣೆಸಿ ನೋಡಬಲೆ। ಬರಿ। ಮನ್ನಣೆಯಿಂದೇನೆಲೆ ॥ ತಣ್ಣಗಿನನ್ನವ। ನುಣ್ಣರು ಚಿಣ್ಣರು। ಹಣ್ಣು ಸಕ್ಕರೆಯನ್ನು। ತಿನ್ನಿಸುವೆನು ನಾನು ॥ ೩ ॥ ಸಾರಸಾಂಬಕಿ ಸರ। ಸದೊ। ಳೂರಮಾನವಂತರ ॥ ಸೇರಿ ಸಂಭ್ರಮದೊಳು। ಸಾರಿಬಂದು ದಕುಪ। ಚಾರ ಬೇಜಾರವೆಲ್ಲ। ನಾರಾಯಣನೆ ಬಲ್ಲ ॥ ೪ ॥ ಶ್ರೀಃ ॥

## ಮನೆ ಕಡೆಯುವರ ಹಾಡು

೨೪ ರಾಗ ಬೇಹಾಗ್, ಆದಿತಾಳ ] [ ದಾಟಿ — ಮೇಲಿನಮಟ್ಟು

ಯಾಕಿಂತು ದೂರುವಿಯೆ। ಪ್ರಿಯೆ। ಸಾಕಿನ್ನು ವಯ್ಯಾರಿಯೆ ॥ ಕಾಕುವಾಕುಗಳೊಳು। ಕಾಕಸಮಾನಳು। ಕೋಕಿಲರೂಪೆ ವಿ। ವೇಕರಹಿತೆ ಬಲು ॥ ಯಾಕಿಂತು ॥ ಪಲ್ಲ ॥ ಬಂಧುವು ನೀನೇ ಸರಿ। ನವ। ಬಂಧುತ್ವ ವಾಣೀದೊರಿ ॥ ಸಂಧಿಸಿದನು ದುಸ್ಸಂ। ಬಂಧವನೀಪರಿ। ನೊಂದು ತಾನಿಂದು। ಮತ್ತೆಂದು ಫಲಗಳೇನು ॥ ಯಾ ॥ ೧ ॥ ಅನ್ನವ ದೂರುವಿಯೆ। ಜೇರಿಗೆಶಾ। ಲ್ಯಾನ್ನವ ಕಂಡರಿಯೆ ॥ ಉಣ್ಣತೊಡಲು ಬಲು। ತಿಣ್ಣವೇರಲು ಹಾಲು। ಬೆಣ್ಣೆ ಹಣ್ಣುಗಳನ್ನಿ। ತಿನ್ನ

ಲ್ಲುಳಿಯೆ ಜಾಣೆ ॥ ೨ ॥ ಕಾಡದಿರೆವ್ಮೊಡನೆ। ಮತಿ। ಗೇಡಿಯತ್ತಿಗೆ ನೀನೆ॥ ಜೋಡೆಯುರಂದದೊ। ಆಡುವೆ ಹಾಡುವೆ। ರೂಢಿಯೊಳಗೆ ನಗೆ। ಗೇಡಾಗೂಡುವೆ ಮಿಗೆ॥ ೩ ॥ ಸಾರಿದೆ ನಿನ್ನಾಣೆ ನಾ। ಮಿತಿ। ಮೀರಿ ತಿಂದರೀಕ್ಷಣ ॥ ಸೇರಾದಿರದು ರುಜೆ। ನೀ ರಾವಣಾನುಜೆ। ನಾರಾಯಣನು ದಯ। ದೋರನು ನಿಶ್ಚಯ ॥ ಯಾಕಿಂತು ॥ ೪ ॥ ಶ್ರೀಃ ॥

## ದಿಬ್ಬಣದ ಕಡೆಯುವರ ಹಾಡು.

೨೫ ರಾಗ ಜಂಜೂಟಿ, ರೂಪಕತಾಳ ] [ ದಾಟಿ —ವೈಶಾಖಮಾಸವಾಸಂತೀಕೆ

ಕರೆವಾರು ಬಾರೆ। ಕಂಜನೇತ್ರೆ। ಪರಿಯುನರಿವರೆ। ಸರಿವಾರು ಬಾರ। ದಿರಲು ಪಂಕ್ತಿ। ತೊರೆದು ಸಭಿಕರೇ ॥ ಕರೆವಾರು। ಬಾರೆ ॥ ॥ ಪಲ್ಲ ॥ ಜಲಕೆಂದು ಪೋದೆ। ಮಾಯವಾದೆ। ಸುಂದರಾಂಗಿಯೆ ॥ ಮಧುಬಿಂದು ಕಲಹವ್ಯಾತಕೀಗ। ಮಂದಯಾನೆಯೆ ॥ ಕರೆವಾರು ॥ ॥ ೧ ॥ ತಡವಾಯ್ತು ಕೂತು। ಬಲು ಬೇಸತ್ತು। ಸೋತೆವೀಗಲೆ ॥ ಸುಡು ನೀತಿಯಿಲ್ಲದೇತಕೆಲ್ಲ। ನೂತನಗಳಿಲೆ ॥ ೨॥ ಬರಿದೇತಕಿಂತು। ಮೌನವಾಂತು। ಕೂತೆಯತ್ತಿಗೆ ॥ ದಾತ ಶ್ರೀನಾರಾಯಣನಿಗೆ। ಪ್ರಾರ್ಥಿಸೆ ಮಿಗೆ ॥ ಕರೆವಾರು ॥ ೩ ॥ ಶ್ರೀಃ ॥

## ಮನೆ ಕಡೆಯುವರ ಹಾಡು.

೨೬ ರಾಗ ಜಂಜೂಟಿ, ರೂಪಕತಾಳ ] [ ದಾಟಿ —ಮೇಲಿನಮಟ್ಟು

ಸರಿಯಾರೆ ನೀರೆ। ಜಗದಿ ನಿನಗೆ। ಮೀರಿ ದೂರ್ವರೆ॥ ಸರಿ ನಾರಿಯರೆ। ನಿನ್ನ ನುಡಿಗೆ। ಸಾರಿ ಪೋಪರೆ॥ ಸರಿ॥ ಪಲ್ಲ॥ ಮಿತಿ ಮೀರಿ ತಿಂದು। ಉದರವಿಂದು। ಭೇರಿಯಾಯಿತೆ॥ ಸತಿಯುರ ಕರೆಸಿ। ಕರವ ಪಿಡಿಸೆ। ಕ್ರೂರ ಜನಹಿತೆ ॥ ೧ ॥ ಬಡಿವಾರವೆಲ್ಲ। ಬಿಡು ನೀ ಬಲ್ಲ। ನಾರಿಯರೆಲ್ಲ॥ ನುಡಿವಾರೆ ನಿನ್ನ। ತೆರದಿ ಹೀನ। ಕ್ರೂರನುಡಿಗಳ ॥ ೨ ॥ ಸರಿನಿಲ್ಲೆ ನಲ್ಲೆ। ಮೆಲ್ಲ ಸೊಲ್ಲ। ನೆಲ್ಲ ನಿಲ್ಲಿಸೆ॥ ಸಿರಿನಲ್ಲ ಶ್ರೀನಾ। ರಾಯಣನಿಗೆ। ಸಲ್ಲದೀ ಪುಸಿ ॥ ಸರಿಯಾರೆ ನೀರೆ॥ ೩ ॥

## ದಿಬ್ಬಣದ ಕಡೆಯುವರ ಹಾಡು.

೨೭ ರಾಗ ಪೂರ್ವಿಕಲ್ಯಾಣಿ, ಏಕತಾಳ.

ಮನಸಿಜನರಗಿಣಿ । ಮನ್ನಿಸೆ ರಮಣಿ । ಮನವಲಿದೆಮ್ಮೊಳು ನೀ । ಯೇ ತರುಣಿ ॥ ಮನವಲಿದೆಮ್ಮೊಳು ನೀ ॥ ಪಲ್ಲ ॥ ಕನ್ನೆಯೆ ಕೇಳ್ ಚಿತ್ರಾನ್ನವು ದಧಿದು । ಗ್ಧಾನ್ನಗಳೆಲ್ಲಿಹುದು । ದಧಿದು । ಗ್ಧಾನ್ನಗಳೆಲ್ಲಿಹುದು ॥ ದೊನ್ನೆಯೊಳೆ ಪರ । ಮಾನ್ನಘೃತವ ನಾ । ಕಣ್ಣೊಳು ಕಾಣೆನದು ॥ ಮನಸಿಜ ॥ ೧ ॥ ಲಾಡು ಜಿಲುಬಿ ಪಯ ನೀಡುವ ಪೇಣಿಯ । ಪೋಡಿ ಗುಳ್ಳೋರಿಗೆಯ । ಸಕ್ಕರೆಯ । ಕೂಡಿದ ಮಂಡಿಗೆಯ ॥ ಜೋಡು ಹಪ್ಪಳಸೆಂಡಿಗೆ ಹೋಳಿಗೆಯ । ನೀಡದೆ ಕುಳಿತಿಹೆಯ ॥ ೨ ॥ ದೋಸೆ ಕಡುಬು ಶ್ಯಾಮಿಗೆ ಚಕ್ಕುಲಿಯ । ಕಾಸಿದ ಕೆಂಬಜೆಯ । ಅಂಬಡಿಯ । ಆಸು ಕರ್ಜಿಯಕಾಯ ॥ ತೋಷದಿ ಬಡಿಸೆ । ಕ್ಲೇಶವ ಬಿಡಿಸೆ । ಶ್ರೀಶನ ಸಂತಯಿಸೆ ॥ ಮನಸಿಜ ॥ ೩ ॥

## ಮನೆ ಕಡೆಯುವರ ಹಾಡು.

೨೮ ರಾಗ ಪೂರ್ವಿಕಲ್ಯಾಣಿ, ಏಕತಾಳ ] [ ದಾಟಿ —ಮೇಲಿನಮಟ್ಟು

ಸರಸಿಜನಯನೆ । ಸುರುಚಿರವದನೆ । ಜರೆವುದು ಥರವೇನೆ ॥ ಹೇ ಸುಗುಣೆ । ಜರೆವುದು ಧರವೇನೆ ॥ ಪಲ್ಲ ॥ ಕನ್ನೆಯೆ ಕೇಳ್ ಚಿತ್ರಾನ್ನವು ದಧಿ ದು । ಗ್ಧಾನ್ನಗಳೆಲ್ಲವನಾ । ನೀಡಿದುದ । ಮಿಣ್ಣನೆ ಸವಿದು ಘನ ॥ ದೊನ್ನೆಯೊಳೆ ಪರ । ಮಾನ್ನ ಘೃತವ ನೀ । ನುಣ್ಣುತ ಸಟೆವಚನ ॥ ಸರಸಿಜ ॥ ೧ ॥ ಲಾಡು ಜಿಲುಬಿ ಪಯ ನೀಡುವ ಪೇಣಿಯ । ಪೋಡಿ ಗುಳ್ಳೋರಿಗೆಯ । ಸಕ್ಕರೆಯ । ಕೂಡಿದ ಮಂಡಿಗೆಯ ॥ ಜೋಡು ಹಪ್ಪಳ ಶೆಂಡಿಗೆ ಹೋಳಿಗೆಯ । ನೀಡಲು ಮರೆದಿಹೆಯ ॥ ॥ ೨ ॥ ದೋಸೆ ಕಡುಬು ಶ್ಯಾಮಿಗೆ ಚಕ್ಕುಲಿಯ । ಕಾಸಿದ ಕೆಂಬಜೆಯ । ಅಂಬೊಡೆಯ । ಆಸು ಕರ್ಜಿಯಕಾಯ ॥ ತೋಷದಿ ಬಡಿಸಿದೆ । ದೋಷವ ನುಡಿದೆ । ಶ್ರೀಶಗೆ ಸರಿಯುಹುದೆ । ಹೇ ಮುಗುದೆ । ಶ್ರೀಶಗೆ ಸರಿಯುಹುದೆ ॥ ಸರಸಿಜ ॥ ೩ ॥ ಶ್ರೀಃ ॥

## ದಿಬ್ಬಣದ ಕರೆಯುವರ ಹಾಡು.

೫ ರಾಗ . , ಏಕತಾಳ ] [ದಾಟಿ—ಮೋಹನಮುರಲೀವಾಲಾ

ಸೋತೆ ನಿನ್ನೊಳು ಮದನಾನೆಯೆ । ದಿಟ । ಸೋತೆ ನಿನ್ನೊಳು ಮದನಾನೆಯೆ ॥ ಮಾತಿನೊಳಗೆ ಬಲು ಜಾಣೆಯೆ ॥ ಸರಿ । ಸೋತೆ ನಿನ್ನೊಳು ಮದನಾನೆಯೆ ॥ ಪಲ್ಲ ॥ ಬಂಧುಗಳೆಲ್ಲ । ಬಂದಿಹರಲ್ಲ । ನಿಂದೆಯ ನುಡಿಗೆಡೆ ಮಾಡಿದೆ ॥ ಸರಿ । ಸೋತೆ ॥ ೧ ॥ ಮೊಗವನು ತೋರಿ । ನಗೆಯನು ಬೀರಿ । ಮುಗುದೆಯೆ ಬಡಿಸದೆ ಸಾರಿದೆ ॥ ಸರಿ । ಸೋತೆ ॥ ೨ ॥ ಅಕ್ಕರೆಯಿಂದ । ಇಕ್ಕಲು ಚಂದ । ತಕ್ಕುಪಚಾರ ವಿಚಾರವೇ ॥ ಸರಿ । ಸೋತೆ ॥ ೩ ॥ ಮಾನದ ಪರಿಯೆ । ನೀನೇನರಿಯೆ । ಶ್ರೀನಾರಾಯಣ ವೈರಿಯೆ ॥ ಸರಿ । ಸೋತೆ ನಿನ್ನೊಳು ॥ ೪ ॥ ಶ್ರೀಃ ॥

## ಮನೆ ಕರೆಯುವರ ಹಾಡು.

೩೦ ರಾಗ . . , ಏಕತಾಳ ] [ದಾಟಿ—ಮೋಲಿನಮಟ್ಟು

ಏತಕೆ ಜರಿಯುವೆ ಮಾನಿನಿ । ಬರಿ । ದೇತಕೆ ಜರಿಯುವೆ ಮಾನಿನಿ ॥ ಖಾತಿಯ ಬಿಡು ಗಿಣಿಭಾಷಿಣಿ ॥ ಬರಿ । ದೇತಕೆ ॥ ಪಲ್ಲ ॥ ಮುಗುಧೆಯರೆಲ್ಲ । ನಗುತಿಹರಲ್ಲ । ಪಗೆಯುವರಂದದೊಳಾಡುವೆ ॥ ಬರಿ । ದೇತಕೆ ॥ ೧ ॥ ಮಕ್ಕಳಿಗೆಲ್ಲ । ಉಕ್ಕುವ ಹಾಲ । ಸಕ್ಕರೆಕೂಡಿಸಿ ನೀಡಿದೆ ॥ ಬರಿ ॥ ೨ ॥ ಬಡಿಸಿದುದೆಲ್ಲ । ಯೆಡೆಯೊಳಗಿಲ್ಲ । ವಡಲು ಗಣೇಶಗೆಣೆ ಭಲಾ ॥ ಬರಿ । ದೇತಕೆ ॥ ೩ ॥ ಜಾಣೆಯೆ ನೀನು । ಹೀನಿಸಲೇನು । ಶ್ರೀನಾರಾಯಣನೊಲಿಯನು ॥ ಬರಿ । ದೇತಕೆ ಜರಿಯುವೆ ॥ ೪ ॥ ಶ್ರೀಃ ॥

## ದಿಬ್ಬಣದ ಕರೆಯುವರ ಹಾಡು.

೩೧ ರಾಗ ತೋಡಿ, ರೂಪಕತಾಳ.] [ದಾಟಿ—ಬಾರೊ ಪ್ರಿಯಾ ಮೊಗವ ತೋ

ಬಾರೆ ಪ್ರಿಯೆ । ಮಾರಜಾಯೆ । ತೋರೆ ಮೊಗವ ನಾರಿಯೆ ॥ ಬಾರೆ ಪ್ರಿಯೆ ॥ ಪಲ್ಲ ॥ ಯಾರಿಗೊರೆಯಲೆಂಬುದರಿಯೆ । ನೀರನಿಷ್ಟು ತೋರಿಸೆ ಸಖಿ । ವಾರಿಜಮುಖಿ ॥ ಬಾರೆ ಪ್ರಿಯೆ ॥ ಅನುಪಲ್ಲ ॥ ತಡವಿ

ದೇಕೆ । ಬಡಿಸೆ ಮೂಕೆ ನುಡಿಯದೇತಕೆ ॥ ನಡದೆ ಜಾಣೆ । ನುಡಿ ಪ್ರವೀಣೆ । ಬಡಿವಾರದೊಳೆಣೆ । ಗಾಣೆ ॥ ಬಾರೆ ಪ್ರಿಯೆ ॥ ೧ ॥ ಬೀಗರಾಗಿ ಬಂದವರಿಗೀ । ರೋಗ ದೂಟವೆ ॥ ಪೋಗಿರೆನ್ನಲಾಗಿ ಸಾಗಿ । ಪೋಗಲಾರೆವೆ । ಭಾವೆ ॥ ಬಾರೆ ಪ್ರಿಯೆ ॥ ೨ ॥ ಜಾಣೆ ನಿನ್ನ ಸರಿಸಮಾನ । ಹೀನ ಸತಿಯರ ॥ ಕಾಣೆ ಶ್ರೀನಾ । ರಾಯಣನ್ನ । ಧ್ಯಾನಿಸೆ ಮುನ್ನ । ಘನ್ನ ॥ ಬಾರೆ ॥ ೩ ॥ ಶ್ರೀಃ ॥

## ಮನೆ ಕಡೆಯುವರ ಹಾಡು.

೩೨ ರಾಗ ತೋಡಿ, ರೂಪಕತಾಳ ] [ ದಾಟಿ —ಮೇಲಿನಮಟ್ಟು

ಏನೆ ಸತಿ । ಮದನಯುವತಿ । ಹೀನಕರಮತಿ । ಸುದತಿ ॥ ಏನೆ ಸತಿ ॥ ಪಲ್ಲ ॥ ಕಾಣೆ ನೀತಿ ಶಾನೆ ಖಾತಿ । ಮಾನಿನಿಗೆ ಸರಸವೆ ಸತಿ । ವರೆ ದುರ್ಮತಿ ॥ ಏನೆ ಸತಿ ॥ ಅನುಪಲ್ಲ ॥ ನೀತಿವಂತಳಾದ ಡಿಂಥ । ಪ್ರೀತಿ ವಿರಹಿತ ॥ ಮಾತನಾಡಿ । ಖತಿಯ ಮಾಡಿ । ಭೀತಿಗೊಳಿಪುದೆ । ಮುಗುದೆ ॥ ಏನೆ ॥ ೧ ॥ ಬೀಗಿತಿಯ ರೊಡನೆ ಪ್ರೀಯ । ವಾಗಿರುವ ಪಯ ॥ ಭೋಗಿಯಂತೆ । ಸವಿದು ಪಿಂತೆ । ತೇಗಿದೂರಿದೆ । ಬರಿದೆ ॥ ಏನೆ ॥ ೨ ॥ ತೋಯಜಾಂಬಕಿಯೆ ನಿನ್ನ । ಸೂಯೆತನವನಾ ॥ ರಾಯ ಶ್ರೀನಾ । ರಾಯಣನಂ । ನ್ಯಾಯುವರಿಯನೆ । ಸುಗುಣೆ ॥ ಏನೆ ॥ ೩ ॥ ಶ್ರೀಃ ॥

## ಬಿಬ್ಬಣದ ಕಡೆಯುವರ ಹಾಡು.

೩೩ ರಾಗ ಬೇಹಾಗ್, ರೂಪಕತಾಳ ] [ ದಾಟಿ —ಬೇಡಿಕೊಂಬೆ ನಿನ್ನ ಪ್ರಿಯೆ

ಬಾರೆ ಮಾರನಾರಿ । ಮೊಗ । ದೋರಿಸಲೀಗ । ಬೇಗ ॥ ಬಾರೆ ॥ ಪಲ್ಲ ॥ ನೀರೆ ಪೊಗಳಿ ತೀರದೀಯ । ಪಾರ ಸಂಭ್ರಮಾರಾಧನೆಯ ॥ ಬಾರೆ ॥ ಅನುಪಲ್ಲ ॥ ವಾರಿನಿಧಿಗೆ ಒಗ್ಗರಿಸಿದ । ಸಾರನಿತ್ತು ಸಾರಿದೆ ॥ ಸಾರಸಾಕ್ಷಿ ಸಾರಿನಲ್ಲಿ । ಸಾರವೇನು ತೋರದೆ ॥ ಬಾರೆ ॥ ೧ ॥ ಪಂಕಜಾಕ್ಷಿ ಬಡಿಸಲಿನ್ನು । ಶಂಕೆಪೂದಿದೇಕೆಲೆ ॥ ಕಂಕಣದ ಕರದೊಳೀಗ । ಬಿಂಕವನ್ನು ತೋರೆಲೆ ॥ ಬಾರೆ ॥ ೨ ॥ ಯೆಡೆಯ ಮುಂದೆ

ಕೆಡಿಸಿ ನಿಂದೆ। ಪಡೆವುದಿಂದು ಯೋಗ್ಯವೆ॥ ಬಡಿಸೆನೆಂದು ನುಡಿದ ಡೊಂದು। ಕಡೆಗೆ ತೆರಳಿ ಪೋಗೆವೆ॥ ೩॥ ಮಕ್ಷಿಕಂಗಳೀರ್ಪ ಸ್ವಲ್ಪ। ಭಕ್ಷ್ಯಗಳನೆ ಹಾಕಿದೆ॥ ಲಕ್ಷ್ಮಿಮಿಾಶ ನಾರಾಯಣನೆ। ಶಿಕ್ಷಿಸಾದೆ ಬಿಡುವನೆ॥ ಬಾರೆ ಮಾರನಾರಿ॥ ೪॥ ಶ್ರೀಃ॥

## ಮನೆ ಕಡೆಯುವರ ಹಾಡು.

೩೪ ರಾಗ ಬೇಹಾಗ್, ರೂಪಕತಾಳ] [ದಾಟಿ—ಮೇಲಿನಮಟ್ಟು

ಕಾಡಬ್ಯಾಡ ಕಂಜನೇತ್ರೆ। ಬೇಡಿಕೊಂಬೆ ನಾ। ನಿನ್ನ॥ ಕಾಡ ಬ್ಯಾಡ॥ ಪಲ್ಲ॥ ರೂಢಿಯೊಳಗೆ ಕಾಣೆ ನಿನಗೆ। ಜೋಡುಗಾರ್ತಿ ಪ್ರೌಢೆ ಯರ॥ ಕಾಡಬ್ಯಾಡ॥ ಅನುಪಲ್ಲ॥ ಮಾನವಂತೆಯರಿಗೆ ತಕ್ಕ। ಮಾನ್ಯವಾಗಿ ಬಡಿಸಿದೆ॥ ಜಾಣೆ ನಿನ್ನ ಮನಕೆ ಚೊಕ್ಕ। ಮನ್ನಣೇಯ ಗೈಸಿದೆ॥ ಕಾಡ॥ ೧॥ ಸ್ವಾರ್ಥವಂತಳಾಗಬೇಡ। ವ್ಯರ್ಥ ನಿನ್ನ ಬಾಳುವೆ॥ ಸಾರ್ಥಕವ ಗೈಸು ಪರ। ಮಾರ್ಥವಾಗಿ ಪೇಳುವೆ॥ ೨॥ ಭಕ್ಷಿಸೀಗಪೇಕ್ಷೆಯುಳ್ಳ। ಭಕ್ಷಗಳ ನೀಡಿದೆ॥ ಈಕ್ಷಿಸಾದೆ ದೂಷಿಸಿದೆ। ಶಿಕ್ಷೆಗೀಡ ಮಾಡಿದೆ॥ ೩॥ ಸಾರವುಳ್ಳಹಾರವೆಲ್ಲ। ಮಿಾರಿ ತಿಂದು ತೇಗುವೆ॥ ಶ್ರೀರಮೇಶ ನಾರಾಯಣಗೆ। ಭಾರವಾಗಿ ಪೋಗುವೆ॥ ಕಾಡಬ್ಯಾಡ ಕಂಜನೇತ್ರೆ॥ ೪॥ ಶ್ರೀಃ॥

## ದಿಬ್ಬಣದ ಕಡೆಯುವರ ಹಾಡು.

೩೫ ರಾಗ ತೋಡಿ, ಅಟತಾಳ] [ದಾಟಿ—ಅಡವಿಗೆ ಪೋಪರೇನೋ

ಏನಿದೆನ್ಮೊಳು ಖಾತಿಯೆ। ಬೀಗಿತಿಯೆ॥ ಏನಿ॥ ಪಲ್ಲ॥ ಏನಿದೆ। ನ್ಮೊಳು ಖಾತಿ ಮಾನಿನೀಯರೊಳತಿ। ಹೀನವಂತೆಯುವರ ಸ್ಥಿತಿ। ಯೇ ಸುದತಿ॥ ಏನಿದೆನ್ಮೊಳು॥ ಅನುಪಲ್ಲ॥ ಸುರಸ ಶಾಕವ ನೀಡು। ಸರಸದಿ ಮಾತಾಡು॥ ಬರಿದಾದ ಯೆಲೆಯ ನೋಡು। ದಯ ಮಾಡು॥ ೧॥ ಡಂಬದ ನುಡಿಯಾಡಿ। ನಂಬಿಸದಿರು ಖೋಡಿ॥ ಯಂಬರು ಸ್ಥಿತಿಯ ನೋಡಿ। ಮನವೋಡಿ॥ ಏನಿ॥ ೨॥ ಮಿತ್ರೆ ಬಂದವರೆಲ್ಲ। ಶತ್ರುಬಾಂಧವರಲ್ಲ॥ ಛತ್ರದೂಟಕೆ ಸರಿಯಿಲ್ಲ। ಪುಸಿ

ಯಲ್ಲ ॥ ೩ ॥ ಸಾರಿದನಿನನಸ್ತಾ । ವಾರಿಧಿಯಡೆಗತ್ತ ॥ ನಾರಾಯಣ ಸುಪ್ರೀತ । ನಾಗನುತ ॥ ಏನಿದೆವ್ಮೊಳು ॥ ೪ ॥ ಶ್ರೀಃ ॥

## ಮನೆ ಕಡೆಯುವರ ಹಾಡು.

೩೬ ರಾಗ ತೋಡಿ, ಅಟತಾಳ ] [ ದಾಟಿ —ಮೇಲಿನಮಟ್ಟು

ದೂರದಿರೆ ಸುಂದರಿ । ಯೇ ನಾರಿ । ದೂರದಿರೆ ಸುಂದರಿ ॥ ॥ ಪಲ್ಲ ॥ ದೂರದಿರೆಲೆ ನಾರಿ । ಕ್ರೂರತನವ ದೋರಿ । ನೀರೆ ಸಾವುಕೆ ನೀ ವೈರಿ ॥ ವಯ್ಯಾರಿ ॥ ದೂರದಿರೆ ಸುಂದರಿ ॥ ಅನುಪಲ್ಲ ॥ ಉಂಡು ದೂರುವ ಸತಿ । ದಿಂಡೆಯೆ ನಿಜನೀತಿ ॥ ಗೊಂಡು ನುಡಿಯೆ ದುರ್ಮತಿ । ಅಪಖ್ಯಾತಿ ॥ ದೂರದಿರೆ ॥ ೧ ॥ ಮಾರಿ ತಿನ್ನುವ ಸಣ್ಣ । ಮೋರೆ ಗಂದಿತು ಬಣ್ಣ ॥ ಬೇರಾಯ್ತು ಉದರ ತಿಣ್ಣ । ಬರಿದೆನ್ನ ॥ ದೂರ ॥ ॥ ೨ ॥ ಮಾನಿನಿಯರೊಳತಿ । ಹೀನೆ ನಿನ್ನಯ ಸ್ಥಿತಿ ॥ ಕಾಣುವೆ ನೀ ದುರ್ಗತಿ । ಯೇ ಸುದತಿ ॥ ದೂರ ॥ ೩ ॥ ಬಾಯ ನಿಂದೆಗೆ ಶ್ರೀನಾ । ರಾಯಣನೊಲಿಯನಾ ॥ ಕಾಯಜನಯ್ಯನಿಗೆ । ಮರೆ ಹೋಗೆ ॥ ದೂರದಿರೆ ॥ ೪ ॥ ಶ್ರೀಃ ॥

## ಬಿಬ್ಬಣದ ಕಡೆಯುವರ ಹಾಡು.

೩೭ ಶಂಕರಾಭರಣ, (ನೋಟು) ಏಕತಾಳ ] [ ದಾಟಿ —ಸಾಸಸ ರೀ ಸನಿ ಸಸ ಗಾರೀ

ಬಾ ಲಲನಾಮಣಿ ಶುಕವಾಣಿ । ನೀಲಾಳಕಿ ಪನ್ನಗವೇಣಿ ॥ ವಾಲೆಮಿರುಪ ಕ । ಪೋಲೆ ಪುತ್ಥಳಿ । ಮಾಲೆ ಜರಿಯ ಯಂಬರ ಪಾಣಿ ॥ ಬಾ ಲಲನಾ ॥ ಪಲ್ಲ ॥ ವಾರೆಯ ನೋಟದಿ ಸಾರುವಿಯೆ । ಮೋರೆಯ ರೋಷವ ತೋರುವಿಯೆ ॥ ನೀರೆ ನಗೆಮೊಗ । ದೋರೆ ಸದ್ಗುಣ । ಬೀರೆ ಘನ ಗಂಭೀರೆ ಪ್ರಿಯೆ ॥ ಬಾ ॥ ೧ ॥ ಯಾಕೀಪರಿ ಯೊಳು ಸೋಲಿಸುವೆ । ಬೇಕಾದುದ ಬಡಿಸದೆ ಭಾವೆ ॥ ಸಾಕೆ ಡಂಬವಿ । ದೇಕಾಡಂಬರ । ಶೋಕವ ಬಿಡೆ ಗ್ರಹವನು ಪೊರಡೆ ॥ ೨ ॥ ಬಲ್ಲಿದ ಸತಿಯುಡು ಬಳಲುವರು । ನಿಲ್ಲದೆ ದಾಹದಿ ಮರುಗುವರು ॥ ನಲ್ಲೆ ನೀ ಮನೆ । ಯಲ್ಲಿ ಸಟೆ ನುಡಿ । ಸೊಲ್ಲಿಸಿದರೆ ಫಲವೆಲ್ಲಿಹುದು ॥ ೩ ॥ ಬಾಯಲಿ

ಪೌರುಷವ್ಯಾಕಷ್ಟ । ತೋಯುವನಾಡಲು ನೀಡಪ್ಪ ॥ ಕಾಯುವ ಕಾಯುವ । ಆಯತಿಕೆಯ ನಾ । ರಾಯಣನೊಲಿಯುನು ಕೇಳಪ್ಪ ॥ ಬಾ ಲಲನಾ ॥ ೪ ॥ ಶ್ರೀಃ ॥

## ಮನೆ ಕಡೆಯುವರ ಹಾಡು.

೩೮ ರಾಗ ಶಂಕರಾಭರಣ, (ಸೋಟು) ಏಕತಾಳ ] [ ದಾಟಿ —ಮೋಲಿನಮಟ್ಟು

ಸರಸಿಜಮುಖಿ ಕೇಳಲೆ ತರುಣಿ । ದೂರುವಬ್ಯಾತಕೆ ಸಾರಿಮಣಿ ॥ ಶೂರೆ ಗುಣಮಣಿ । ಮಾರನರಗಿಣಿ । ಹಾರೆ ದುರ್ಗುಣಿ । ಹೇರಮಣಿ ॥ ಸರಸಿಜಮುಖಿ ॥ ಪಲ್ಲ ॥ ಹಪ್ಪಳ ಶೆಂಡಿಗೆ ಹೋಳಿಗೆಯ । ಚಪ್ಪರಿಸಿದೆ ಸೂರಾರ್ಬಗೆಯ ॥ ಅಪ್ಪವ ಹಾಕಿಸಿ । ತುಪ್ಪದಿ ಮುಣುಗಿಸಿ । ರೆಪ್ಪೆಯ ಮುಚ್ಚುತ ನುಂಗಿದೆಯ ॥ ಸರ ॥ ೧ ॥ ಚಕ್ಕುಲಿ ವಡೆ ಶ್ಯಾಮಿಗೆ ರಾಶಿ । ಮುಕ್ಕಿದೆ ಬಾಯೊಳು ಕುಲನಾಶಿ ॥ ಇಕ್ಕೆಂದು ಬೇಡಿಸಿ । ಹಾಕ್ಕೊಂಡೆಯರಸಿ । ಸಾಕಲಿಲ್ಲವೆ ನಿನಗೆ ಕರ್ಕಸಿ ॥ ೨ ॥ ಭೋಗಿಯು ತೆರದಲಿ ನುಂಗುತಲಿ । ತೇಗುವೆ ರಕ್ಕಸಿಯಂದದಲಿ ॥ ರಾಗದ ಸೊಬಗಸ । ರಾಗದಿ ತೋರಲು । ಕೂಗುವೆ ಸಟಿನುಡಿ ಪಾಡುತಲಿ ॥ ೩ ॥ ಬಾಯಲಿ ದೂರಿದಡೇನು ಗುಣ । ಘಾಯಗಳಪ್ಪುದೆ ಪೇಳ್ ನಿನ್ನ ॥ ಕಾಯನು ಶ್ರೀನಾ । ರಾಯಣನವಗುಣ । ಮಾಯುವ ಮಾಡಿದಡದು ಸುಗುಣ ॥ ಸರಸಿಜಮುಖಿ ಕೇಳಲೆ ತರುಣಿ ॥ ೪ ॥ ಶ್ರೀಃ ॥

## ದಿಬ್ಬಣದ ಕಡೆಯುವರ ಹಾಡು.

೩೯. ರಾಗ ತುಜಾವಂತು, ಆದಿತಾಳ ] [ ದಾಟಿ —ಸಖಿಯೇ ಲಾಲಿಸೀಗಲೇ

ಸಖಿಯೆ । ತೋರೆ ದಾರಿಯು ॥ ಸುಖವಾಯಿತು ಬೇಗರ । ಸನ್ಮಾನವು ॥ ಸಖಿಯೆ ॥ ಪಲ್ಲ ॥ ಎಡೆಯು ಬಳಿಯು ಕೂತು । ತಡೆಯು ಬಾರದೆ ಸೋತು ॥ ನಡೆದು ಬರಲು ಜಲ । ಬಿಡಿಸದಿಹೆಯು ॥ ಸಖಿಯೆ ತೋರೆ ॥ ಅನುಪಲ್ಲ ॥ ಗತಿಯಿಲ್ಲದಿರೆ ಕರ । ಪತಿಗೆಯು ನೀಡೆ ಪರ ॥ ಹಿತವಂತರ ನುತಿ । ಸುತ ತಂಸೆಯು ॥ ಸಖಿಯೆ ॥ ೧ ॥ ಬಡಿವಾರ [illegible]ಲು । ಪೊಡವಿಯೊಳ್ ಧನಿಕರು ॥ ಕೊಡವಿಲ್ಲದೆ ವ್ಯಥ ।

ಗಡಿಗೆ ಇಟ್ಟಳು ॥ ೨ ॥ ಮಾನವನರಿಯದ । ಹೀನಬಂಧುತ್ವವಿದ ॥ ಶ್ರೀನಾರಾಯಣ । ತನುಜ ಬರದ ಸಖಿಯೆ ॥ ೩ ॥ ಶ್ರೀಃ ॥

## ಮನೆ ಕಡೆಯುವರ ಹಾಡು.

೪೦ ರಾಗ ತುಜಾವಂತು, ಆದಿತಾಳ ] [ ದಾಟಿ—ಮೇಲಿನಮಟ್ಟು

ಸಖಿಯೆ ನೋಡೆ ವಾರಿಯ ॥ ಸುಖವಾಗದಿರಲು ಕಾ । ಸಿದ ಜಲವಿದೆ ॥ ಸಖಿಯೆ ॥ ಪಲ್ಲ ॥ ಯೆಡೆಯೊಳು ಬಡಿಸಿದ । ವಡವೆಯ ತಿಂದು ಹದ ॥ ನಡೆಯದೆ ನಿಂತಡಿ । ಗಿಡೆನುವೆ ಜಲ ॥ ಸಖಿಯೆ ॥ ॥ ೧ ॥ ವಾಲೆ ಬಾವಲಿ ಸರ । ಮಾಲೆ ಹಾಕಿದಬ್ಬರ ॥ ಕಾಲಡಿ ಕಾಣದೆ । ಮೇಲೆ ನೋಡಿದೆ ॥ ಸಖಿಯೆ ॥ ೨ ॥ ಅನ್ಯರೊಡವೆಯತು । ತಿನ್ನುತೀಪರಿ ಕಣ್ಣು ॥ ಹೊನ್ನ ಪಾತ್ರೆ ಮ । ಣ್ಣೆನ್ನಿಸಿತೇನ್ ॥ ಸಖಿಯೆ ॥ ॥ ೩ ॥ ಶ್ವಾನದಬ್ಬರ ಸುರ । ಸ್ಥಾನವ ಕೆಡಿಪುದೆ ॥ ಶ್ರೀನಾರಾಯಣ । ನರಿವನು ಗುಣ ॥ ಸಖಿಯೆ ॥ ೪ ॥ ಶ್ರೀಃ ॥

## ಎರಡೂ ಕಡೆಯುವರು ಒಟ್ಟಿಗೆ.

೪೧. ರಾಗ ಸುರುಟಿ, ರೂಪಕತಾಳ ] [ ದಾಟಿ —ಮಂಗಳಾರತಿಯ ಪಾಡಿರೆ

ಮಂಗಳಾಂಗಿ ಮನ್ನಿಸೆನ್ನ । ಮಂಗಳೋಕ್ತಿಯ । ಪ್ರಿಯೆ ॥ ಮಂಗಳಾಂಗಿ ಮನ್ನಿಸೆನ್ನ । ಮಂಗಳೋಕ್ತಿಯ ॥ ಪಲ್ಲ ॥ ಅಂಗನೆ ಕುರಂಗನಯನೆ । ಹಿಂಗದೆಮ್ಮ । ಇಂಗಿತವನೆ ॥ ಸಾಂಗದಿಂದ ಸಲಿಸಿದೆ ಪನ್ನಂಗವೇಣಿಯೆ ॥ ಪ್ರಿಯೆ ॥ ಮಂಗಳಾಂಗಿ ॥ ೧ ॥ ದೋಷವಿಲ್ಲ ನಿನ್ನೊಳು ಮಿಗೆ । ದ್ವೇಷವಿಲ್ಲ ನಿಮ್ಮೊಳೆನಗೆ ॥ ಹಾಸಭಾಷಿತಂಗಳಂಗೆ । ತೋಷಿಸತ್ತಿಗೆ ॥ ಹೀಗೆ ॥ ಮಂಗಳಾಂಗಿ ॥ ೨ ॥ ಊಟದೆಡೆಯೊಳನ್ಯ ನುಡಿ ಗ । ಲಾಟೆಯಾಗದಂತೆ ಬೇಗ ॥ ರಾಟಕಾಗಿ ನುಡಿದೆವೀಗ । ಸಾಟಿಯಾಗಿಯೆ ॥ ಪ್ರಿಯೆ ॥ ೩ ॥ ನೆರೆದ ಸಭೆಯ ನಾರಿಯರನು । ಮೆರವ ವರವಧುಗಳನ್ನು ॥ ಸಿರಿನಾರಾಯಣರು ಸಹಿತ । ಪೊರೆವರು ನಿರತ ॥ ಹಿತ ॥ ಮಂಗಳಾಂಗಿ ॥ ೪ ॥ ಶ್ರೀಃ ॥

೪೨ ರಾಗ ಸುರುಟಿ, ಆಟತಾಳ

ಮಾಧವನಿಗೆ ॥ ಮಂಗಳಂ । ಮಂಗಳಂ ॥ ಪಲ್ಲ ॥ ಅಂಗಜನಯ್ಯಗೆ । ಮಂಗಳ ಮಹಿಮಗೆ ॥ ತುಂಗವಿಕ್ರಮಗೆ ವಿ । ಹಂಗವಾಹನಗೆ ॥ ಮಂಗಳಂ ॥ ೧ ॥ ಸಾಮಜವರದಗೆ । ಸಾಮವಿನೋದಿಗೆ ॥ ತಾಮರಸಾಕ್ಷಗೆ । ಸೋಮಸನ್ನಿಭಗೆ ॥ ಮಂ ॥ ೨ ॥ ತೋಯಜನಾಭನಾ । ರಾಯಣ ಮೂರ್ತಿಗೆ ॥ ಮಾಯವಿದಾರಿ ಮೋ । ದಾರ್ಯೇಶಹರಿಗೆ ॥ ಮಂಗಳಂ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

# ಕನ್ನಡ ಸ್ತ್ರೀಪದ್ಯಮಾಲಿಕೆಯ ಎರಡನೆಯ ಭಾಗವು

# ಸಂಪೂರ್ಣವು.

॥ ಶ್ರೀಕೃಷ್ಣಾರ್ಪಣಮಸ್ತು ॥



ಅ ನಾರ್ಣಪ್ಪಯ್ಯನವರಿಂದ ರಚಿಸಲ್ಪಟ್ಟ ಈ ಪುಸ್ತಕವು ಪಾವ
ಇವರ ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟು, ಶ್ರೀಮನ್ಮಧ್ವ
ಗ್ರಂಥಾಲಯದಿಂದ ಪ್ರಕಟಿಸಲ್ಪಟ್ಟಿತು ಶಾ ಶಕ ೧೮೫೫ 1933

